

# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ

ಸಂಪ್ರಬಂಧದ ವಿಷಯ

## ಕನ್ನಡ ಗ್ರಂಥ ಸಂಪಾದನೆಗೆ ಎಲ್. ಗುಂಡಪ್ಪನವರ ಕೊಡುಗೆ

ಮಾರ್ಗದರ್ಶಕರು

ಡಾ. ಎಸ್. ಶಾಂಭವಿ

ಸಂಶೋಧನಾ ವಿದ್ಯಾರ್ಥಿನಿ

ಕವಿತ. ಎಸ್

ವರ್ಷ: ೨೦೧೦-೨೦೧೧



ಅಧ್ಯಯನ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ,

೩ನೇ ಮುಖ್ಯ ರಸ್ತೆ, ನರಸಿಂಹ ರಾಜ ಕಾಲೋನಿ

ಬೆಂಗಳೂರು - ೫೬೦೦೧೯



# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ

ಸಂಪ್ರಬಂಧದ ವಿಷಯ

## ಕನ್ನಡ ಗ್ರಂಥ ಸಂಪಾದನೆಗೆ ಎಲ್. ಗುಂಡಪ್ಪನವರ ಕೊಡುಗೆ

ಮಾರ್ಗದರ್ಶಕರು

ಡಾ. ಎಸ್. ಶಾಂಭವಿ



ಸಂಶೋಧನಾ ವಿದ್ಯಾರ್ಥಿನಿ

ಕವಿತ. ಎಸ್

ವರ್ಷ: ೨೦೧೦-೨೦೧೧



ಅಧ್ಯಯನ ಕೇಂದ್ರ

ಬಿ.ಎಂ.ಶ್ರೀ, ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ,
೩ನೇ ಮುಖ್ಯ ರಸ್ತೆ, ನರಸಿಂಹ ರಾಜ ಕಾಲೋನಿ
ಬೆಂಗಳೂರು – ೫೬೦೦೧೯

# ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೦-೧೧ ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಕನ್ನಡ ಗ್ರಂಥ ಸಂಪಾದನೆಗೆ ಎಲ್. ಗುಂಡಪ್ಪನವರ ಕೊಡುಗೆ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಶ್ರೀಮತಿ **ಡಾ. ಎಸ್. ಶಾಂಭವಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು. ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಕವಿತ. ಎಸ್

ಸಂಶೋಧನಾ ವಿದ್ಯಾರ್ಥಿನಿ

ಕವಿತ. ಎಸ್

ಸ್ಥಳ: ಬೆಂಗಳೂರು.

ದಿನಾಂಕ: 12-06-2011

## ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2010-2011 ಸಾಲಿನ ಎಂ.ಫಿಲ್. ಪದವಿಗಾಗಿ **"ಕನ್ನಡ ಗ್ರಂಥ ಸಂಪಾದನೆಗೆ ಎಲ್.ಗುಂಡಪ್ಪನವರ ಕೊಡುಗೆ"** ಎಂಬ ಸಂಪ್ರಬಂಧವನ್ನು ಶ್ರೀಮತಿ ಕವಿತ. ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಧೃಢೀಕರಿಸುತ್ತೇನೆ.



ಮಾರ್ಗದರ್ಶಕರು

ಎಸ್. ಶಾಂಭವಿ
**ಡಾ.ಎಸ್.ಶಾಂಭವಿ, ಎಂ.ಎ., ಪಿ.ಹೆಚ್.ಡಿ.**

**ಸ್ಥಳ : ಬೆಂಗಳೂರು**

**ದಿನಾಂಕ:** 12-06-2011

ಡಾ॥. ಎಸ್. ಶಾಂಭವಿ
ಎಂ.ಎ., ಪಿ.ಎಚ್.ಡಿ.,
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ

## ಪರಿವಿಡಿ

# ಕನ್ನಡ ಗ್ರಂಥ ಸಂಪಾದನೆಗೆ ಎಲ್. ಗುಂಡಪ್ಪನವರ ಕೊಡುಗೆ

**ಸಂಕೇತ ಸೂಚಿ**

ಮೂ= ಮೂಲ- ಆದಿಪುರಾಣಂ ಸಂ. ಕೆ.ಎಲ್ ನರಸಿಂಹ ಶಾಸ್ತ್ರಿ, ೨೦೦೪, ಪ್ರ = ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು,

ಸಂ= ಸಂಗ್ರಹ- ಆದಿಪುರಾಣ ಸಂಗ್ರಹ, ಎಲ್.ಗುಂಡಪ್ಪ, ಪ್ರ.. ಮೈಸೂರು ವಿಶ್ವವಿದ್ಯಾಲಯ- ೨೦೦೧

ಪು = ಪುಟ

ವ = ವಚನ

ಗ = ಗದ್ಯ

ಪ = ಪದ್ಯ

# ಅಧ್ಯಾಯ – ೧

## ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

**ಪೀಠಿಕೆ**

ಕನ್ನಡ ಸಾಹಿತ್ಯಕ್ಕೆ ಪ್ರಾಚೀನ ಪರಂಪರೆ ಇದೆ, ಈ ಪರಂಪರೆಯನ್ನು ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ವೈದಿಕ ಸಾಹಿತ್ಯ ಎಂದು ಗುರುತಿಸಿಕೊಳ್ಳಬಹುದು, ಮೊದಲಿಗೆ ಜೈನಧರ್ಮದ ಕಾವ್ಯಗಳು ಬಂದವು, ಇದರಲ್ಲಿ ಮೊದಲು ಚಂಪೂ ಕಾವ್ಯಗಳು ಬಂದವು. ಈ ಕಾವ್ಯ ಪ್ರಕಾರದಲ್ಲಿ ಮೊದಲಿಗರು ಪಂಪ, ರನ್ನ, ಜನ್ನ ಮುಂತಾದವರು. ಚಂಪೂ ಪ್ರಕಾರ ಕಾವ್ಯ ಪರಂಪರೆಗೆ ಆದರ್ಶಪ್ರಾಯವಾಗಿದೆ ಮತ್ತು ಪ್ರಚಲಿತದಲ್ಲಿದೆ. ಇವುಗಳನ್ನು ಸಂಗ್ರಹ ಮಾಡಬೇಕಾದರೆ ಪ್ರಾರಂಭದ ಹಂತದಲ್ಲಿ ತಾಳೆಗರಿಯನ್ನು ಬಳಸುತ್ತಿದ್ದರು. ಕಾವ್ಯಾಸಕ್ತರು ಲಿಪಿಕಾರರಿಂದ ತಮಗೆ ಬೇಕಾದ ಕೃತಿಗಳನ್ನು ಪ್ರತಿ ಮಾಡಿಸಿಕೊಳ್ಳುತ್ತಿದ್ದರು. ಇಲ್ಲವೆ ಪ್ರತಿಗಳನ್ನು ಮಾಡಿಸಿ ಇತರರಿಗೆ ಹಂಚುತ್ತಿದ್ದರು.

ನಂತರ ಜರ್ಮನ್ನರ ಮೂಲಕ ಇಟಲಿ ದೇಶಕ್ಕೆ ಮುದ್ರಣಕಲೆ ಬಂತು.[೧] ಕ್ರೈಸ್ತ ಮಿಶನರಿಗಳು ಇವುಗಳ ಮೂಲಕ ತಮ್ಮ ಗ್ರಂಥ ಸಂಪಾದನಾ ಕಾರ್ಯವನ್ನು ಮಾಡತೊಡಗಿದರು. ಈ ಹೊತ್ತಿಗೆ 'ಬೈಬಲ್' ಪರಿಷ್ಕರಣ ನಡೆದಿತ್ತು. ಇದರ ಮುಖಾಂತರ ಅಚ್ಚಿನ ಕೃತಿಗಳು ಬಂದವು. ಉದಾ.: ದಾಸರ ಪದಗಳು, ಜೈಮಿನಿಭಾರತ ಇನ್ನು ಮುಂತಾದವು.

ನಂತರ ದೇಶೀ ವಿದ್ವಾಂಸರುಗಳು ಅಚ್ಚಿನ ಕೃತಿಯನ್ನು ಬಳಸಿ ಸಂಗ್ರಹ ಮಾಡತೊಡಗಿದರು. ನಂತರ ಈ ಅಚ್ಚಿನ ಕಾವ್ಯಗಳು ಪಠ್ಯ ಶಿಕ್ಷಣದಲ್ಲಿ ಮುದ್ರಣವಾಗಿ ಬಂದಿತು. 'ಪ್ರಾಕ್ಕಾವ್ಯ ಮಾಲಿಕೆ' ಎಂಬ ಕಾವ್ಯ ಸಂಗ್ರಹ ಗ್ರಂಥವೊಂದು ಮೊದಲಿಗೆ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾಯಿತು.

ಹೀಗೆ ಕ್ರೈಸ್ತ ಮಿಶನರಿಗಳು, ವಿದೇಶಿ ಪಂಡಿತರು ಮತ್ತು ದೇಶೀ ಪಂಡಿತರ ಮುಖಾಂತರ ಕನ್ನಡ ಕಾವ್ಯ ಸಂಗ್ರಹಗಳು ಮೂಡಿಬಂದವು. ಎರಡನೇ ಹಂತದಲ್ಲಿ ಶಾಲೆಗಳಲ್ಲಿ ಪಠ್ಯಪುಸ್ತಕಗಳು ಪ್ರಾರಂಭವಾದಾಗ ನಮ್ಮಲ್ಲಿ ಸರಳ ಪದ್ಧತಿಯಿತ್ತು. ಬ್ರಿಟಿಷರ ಆಗಮನದಿಂದ ಶಾಲಾ ಪದ್ಧತಿಯು ಹೊಸ ರೂಪವನ್ನು ಪಡೆದುಕೊಂಡಿತು. ಇವರುಗಳು ಅನೇಕ ವಿಷಯಗಳ ಪಠ್ಯ ಪುಸ್ತಕಗಳನ್ನು ಗೊತ್ತುಮಾಡಿ ಪಾಠ ಪ್ರವಚನ ವ್ಯವಸ್ಥೆ ಮಾಡಿದರು. ಪ್ರಾಕ್ಕಾವ್ಯ ಮಾಲಿಕೆ, ಪದ್ಯ ಸಾರ ಕೃತಿಗಳು ಇದಕ್ಕೆ ನಿದರ್ಶನವಾಗಿದೆ. ಜೊತೆಗೆ ಕನ್ನಡ ಬಾವುಟ, ಪದ್ಯರತ್ನಾಕರ, 'ಹೂ ಮಾಲೆ' ಇತ್ಯಾದಿ ಗ್ರಂಥಗಳು ಈ ದೃಷ್ಟಿಯಿಂದ ರಚಿತವಾದವು.

---

[1] ಕನ್ನಡ ಗ್ರಂಥ ಸಂಪಾದನೆ, ಡಿ.ಎಲ್. ನರಸಿಂಹಾಚಾರ್, ಪುಟ ೨೩

ಈ ಹಂತದಲ್ಲಿ ಕಲಿಕಾ ಪಠ್ಯ ಪುಸ್ತಕಗಳು (ಶಾಲಾ ಪಠ್ಯ ಪುಸ್ಕಕ) ಬಂದವು. ಇದರಲ್ಲಿ ಆಯ್ದ ಗದ್ಯ ಮತ್ತು ಪದ್ಯ ಭಾಗ ಸಂಗ್ರಹಗಳು ಪ್ರಕಟವಾದವು. ಇದು ೧೯ನೇ ಶತಮಾನದಲ್ಲಿ ಕಂಡು ಬಂದ ಮುಖ್ಯ ವಿದ್ಯಮಾನಗಳು. ನಂತರ ೨೦ನೇ ಶತಮಾನದಲ್ಲಿ ವಿವಿಧ ಪಾಠಗಳನ್ನು ಆಯ್ಕೆ ಮಾಡಿದ ಪಠ್ಯ ಪುಸ್ತಕಗಳ ಜೊತೆಗೆ ಕಾವ್ಯಗಳು, ಗದ್ಯ, ನಾಟಕ ಮೊದಲಾದ ಮೂಲಕ ಗ್ರಂಥಗಳು ಸಮಗ್ರವಾಗಿ ಪ್ರಕಟವಾಗತೊಡಗಿದವು. ಕುಮಾರವ್ಯಾಸ ಭಾರತ, ಚೆನ್ನಬಸವಪುರಾಣ, ತೊರವೆರಾಮಾಯಣ, ಇವುಗಳನ್ನು ಪ್ರಕಟಿಸುವುದರಲ್ಲಿ ಎಂ.ಎ. ರಾಮಾನುಜಯ್ಯಂಗಾರ್ ಮತ್ತು ನರಸಿಂಹಾಚಾರ್ ಅವರು ಮಹತ್ವದ ಪಾತ್ರ ವಹಿಸಿದರು. ಇವರುಗಳು ೧೮೯೨ ರಲ್ಲಿ ಆರಂಭಿಸಿದ 'ಕರ್ನಾಟಕ ಕಾವ್ಯ ಮಂಜರಿ' ಮಾಸಿಕ, ಮುಂದೆ, 'ಕರ್ನಾಟಕ ಕಾವ್ಯಕಲಾನಿಧಿ'ಯಾಗಿ ಮಾರ್ಪಟ್ಟು ಅದರ ಮೂಲಕ ಅನೇಕ ಪ್ರಾಚೀನ ಕೃತಿಗಳು ಪ್ರಕಟವಾಯಿತು.

ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆಯಾಗುವ ಮೊದಲೇ ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಪದವಿ ತರಗತಿಗಳಿಗೆ ಕನ್ನಡ ಕಾವ್ಯಗಳ ಆಯ್ದ ಭಾಗಗಳನ್ನು ಪಠ್ಯವಾಗತೊಡಗಿದವು.

ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆಯಾದ ಮೇಲೆ ಬಿ.ಎಂ.ಶ್ರೀಕಂಠಯ್ಯ ಯವರ ನೇತೃತ್ವದಲ್ಲಿ ಮೂಲ ಕಾವ್ಯದ ಸಂಪಾದನಾ ಕಾರ್ಯದ ಯೋಜನೆಯನ್ನು ಬಿ.ಎಂ.ಶ್ರೀಕಂಠಯ್ಯ ಪ್ರಾರಂಭಿಸಿದರು. ಈ ಯೋಜನೆಯ ಅಡಿಯಲ್ಲಿ 'ಪಂಪ ರಾಮಾಯಣ ಸಂಗ್ರಹ', 'ಹರಿಶ್ಚಂದ್ರ ಕಾವ್ಯ ಸಂಗ್ರಹ', 'ಯಶೋಧರ ಚರಿತೆ ಸಂಗ್ರಹ' ಪ್ರಕಟವಾದವು. ಈ ಮಾಲಿಕೆಯಲ್ಲಿ ಬಂದ ವಿಶಿಷ್ಟ ಕೃತಿ 'ಆದಿ ಪುರಾಣ ಸಂಗ್ರಹ'.

ತಾಳೆಗರಿ ಗ್ರಂಥಗಳಿಂದ ಹಸ್ತಪ್ರತಿ ಬಂದವು. ಈ ಹಸ್ತಪ್ರತಿ ಗ್ರಂಥಗಳನ್ನು ಅಚ್ಚಿನ ಕಾರ್ಯಕ್ಕೆ ಸಿದ್ಧಪಡಿಸುವ ವಿಧಾನವನ್ನು ಕುರಿತು 'ಗ್ರಂಥಸಂಪಾದನ ಶಾಸ್ತ್ರ' ರೂಪುಗೊಂಡಿತು. ಹಲವಾರು "ಕೃತಿಗಳನ್ನು ಸಂಗ್ರಹಿಸುವುದು, ಪಾಠಾಂತರಗಳನ್ನು ಗುರುತಿಸುವುದು. ಸೂಕ್ತ ಪಾಠ ನಿರ್ಣಯ ಮಾಡುವುದು, ವಿಸ್ತಾರವಾದ ಪೀಠಿಕೆಯನ್ನು ಕವಿ ಕಾವ್ಯದ ಬಗ್ಗೆ ಕೊಡುವ 'ಕೃತಿಯ ವಿಮರ್ಶೆ', ಶಬ್ದಕೋಶ, ಪಾರಿಭಾಷಿಕ ಪದಗಳ ವಿವರಣೆ, ಪದ್ಯಸೂಚಿ ಇತ್ಯಾದಿ ಅನುಬಂಧಗಳನ್ನು ನೀಡುವುದು". ಈ ಗ್ರಂಥಸಂಪಾದನಾ ಶಾಸ್ತ್ರದ ತತ್ವಗಳನ್ನು ಅನುಸರಿಸಿ, ಕಾವ್ಯಗಳನ್ನು ಪರಿಷ್ಕರಿಸಿ ಪ್ರಕಟಿಸುವ ಪದ್ಧತಿ ಬೆಳಕಿಗೆ ಬಂದಿತು.

ಮೂಲ ಕಾವ್ಯ ದೀರ್ಘವಾದ್ದರಿಂದ ವಿದ್ಯಾರ್ಥಿಗಳಿಗೆ ಗೊತ್ತಾದ ಅವಧಿಯಲ್ಲಿ ಅಭ್ಯಾಸ ಮಾಡಬೇಕಾದ್ದರಿಂದ ಶಾಲಾ - ಕಾಲೇಜುಗಳ ವಿದ್ಯಾಭ್ಯಾಸದಲ್ಲಿ ಪೂರ್ಣಕಾವ್ಯದ ಅಭ್ಯಾಸ ಅಸಾಧ್ಯವಾಯಿತು. ಅದಕ್ಕಾಗಿ ಮೂಲಕಾವ್ಯಗಳ ವೈಶಿಷ್ಟ್ಯಕ್ಕೆ ಕುಂದುಬಾರದಂತೆ ಮುಖ್ಯ ಕಥಾಭಾಗ, ಪಾತ್ರದ ವರ್ಣನೆ, ಕವಿಯ ವೈಶಿಷ್ಟ್ಯ ಮೊದಲಾದವುಗಳನ್ನು ಲೋಪವಾಗದಂತೆ ಇಡೀ ಕೃತಿಯನ್ನು ಸಂಗ್ರಹಿಸಿ ಉಪಯುಕ್ತ ಪೀಠಿಕೆ, ಅನುಬಂಧದೊಡನೆ ಪ್ರಕಟಿಸುವ ವಿನೂತನ ಪದ್ಧತಿ ಬಳಕೆಗೆ ಬಂದಿತು.

ಹೀಗೆ ಗ್ರಂಥಸಂಪಾದನಾ ತತ್ವವನ್ನು ಮೂಲ ಗ್ರಂಥಗಳಿಗೆ ಸಂಪಾದನೆಯಲ್ಲಿ ಅನುಸರಿಸುವಂತೆಯೇ ಸಂಗ್ರಹ ಕಾರ್ಯದಲ್ಲಿಯೂ ಅನುಸರಿಸತೊಡಗಿದರು. ಆದರೆ ಪಾಠಾಂತರಗಳನ್ನು ಬಿಟ್ಟು ಪಠ್ಯಭಾಗದಲ್ಲಿ ಮುಖ್ಯವಾದ ಪದ್ಯಗಳನ್ನು ಆಯ್ಕೆ ಮಾಡುವುದರ ಮೂಲಕ ಸಂಗ್ರಹ ಕಾರ್ಯವನ್ನು ಸಾಮಾನ್ಯವಾಗಿ ಎಲ್ಲಾ ಗ್ರಂಥ ಸಂಪಾದನಕಾರರು ಅನುಸರಿಸಿದರು.

### ಉದ್ದೇಶ

ಎಲ್. ಗುಂಡಪ್ಪನವರು ಸಂಗ್ರಹಕಾರ್ಯದಲ್ಲಿ ಅನುಸರಿಸಿದ ರೀತಿ ಬೇರೆಯಾಗಿತ್ತು. 'ವಿಶಿಷ್ಟ'ವಾಗಿತ್ತು. ಅವರು ಗ್ರಂಥದ ಪದ್ಯಸಂಗ್ರಹ ಮಾಡಿದ್ದಷ್ಟೇ ಅಲ್ಲದೆ ಗದ್ಯದ ಭಾಗ. ಪದ್ಯಭಾಗಗಳ ಸಂಯೋಜನೆ. ಗದ್ಯಭಾಗ ಸಂಯೋಜನೆ ಹೀಗೆ ನಾನಾ ವಿಧಗಳಲ್ಲಿ ಅವರು ಕೃತಿಯನ್ನು ಸಂಗ್ರಹಿಸಿದರು. ಅವರ ಈ ಸಂಗ್ರಹ ವಿಧಾನವನ್ನು ನಾಲ್ಕನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕಾವ್ಯ ಸಂಗ್ರಹ ಕಾರ್ಯದಲ್ಲಿ ಇವರು ಅನುಸರಿಸಿದ ವಿಶಿಷ್ಟ ರೀತಿಯನ್ನು ಇದುವರೆಗೆ ವಿಶೇಷವಾಗಿ ಅಧ್ಯಯನ ಮಾಡಿ ಯಾರೂ ವಿಶ್ಲೇಷಿಸಿಲ್ಲ ಮತ್ತು ಸಂಗ್ರಹಣ ಕಾರ್ಯದಲ್ಲಿ ಯಾವ ಯಾವ ಅಂಶಗಳನ್ನು ಗಮನಿಸಬೇಕು, ಗ್ರಂಥಸಂಪಾದನಾ ಕಾರ್ಯದಲ್ಲಿ ಮೂಲಕೃತಿ ಸಂಪಾದನೆಗೂ, ಸಂಗ್ರಹ ಕೃತಿ ಸಂಪಾದನೆಗೂ ಇರುವ ವ್ಯತ್ಯಾಸವೇನು ಇವೇ ಮೊದಲಾದ ಅಂಶಗಳಿಗೆ ವಿಶೇಷವಾದ ಗಮನವನ್ನು ಮೊದಲಬಾರಿಗೆ ನೀಡಿ ಕೆ.ಎಲ್ ನರಸಿಂಹ ಶಾಸ್ತ್ರಿಗಳ 'ಆದಿಪುರಾಣಂ' ದೊಂದಿಗೆ ಎಲ್. ಗುಂಡಪ್ಪನವರು ಸಂಗ್ರಹಿಸಿದ 'ಆದಿಪುರಾಣ ಸಂಗ್ರಹ'ವನ್ನು ಹೋಲಿಸಿ ಸಂಗ್ರಹ ವಿಧಾನವನ್ನು ಹೇಳುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

### ಸ್ವರೂಪ ಮತ್ತು ವ್ಯಾಪ್ತಿ

ಎಲ್. ಗುಂಡಪ್ಪನವರ ಸಂಪಾದಿತ ಕೃತಿಗಳ ಬಗ್ಗೆ ಸಮಗ್ರ ಅಧ್ಯಯನಕ್ಕೆ ಹಿನ್ನೆಲೆಯಾಗಿ ಅವರ ಆದಿ ಪುರಾಣ ಸಂಗ್ರಹವನ್ನು ಮಾದರಿಯಾಗಿಟ್ಟುಕೊಂಡು ಗ್ರಂಥಸಂಪಾದನಾ ವಿಧಾನವನ್ನು ವಿಶ್ಲೇಷಿಸಲಾಗಿದೆ. ಕನ್ನಡದಲ್ಲಿ ಕಾವ್ಯ ಸಂಗ್ರಹಗಳ ಬಗ್ಗೆ

ಸಂಕ್ಷಿಪ್ತ ಸಮೀಕ್ಷೆಯನ್ನು ಕೈಗೊಂಡು ಅದರ ಹಿನ್ನೆಲೆಯಲ್ಲಿ ಎಲ್.ಗುಂಡಪ್ಪ ನವರ ಆದಿಪುರಾಣ ಸಂಗ್ರಹದ ಸ್ಥಾನಮಾನಗಳನ್ನು ನಿರ್ದೇಶಿಸುವ ಅಗತ್ಯವಿತ್ತು. ಆ ಕಾರ್ಯವನ್ನು ಈ ಅಧ್ಯಾಯದಲ್ಲಿ ಕೈಗೊಂಡಿರುವುದು ಇದರ ಸ್ವರೂಪವಾಗಿದೆ.

ಎಲ್. ಗುಂಡಪ್ಪನರವರ ಸಂಪಾದಿತ ಕೃತಿಗಳು ಹತ್ತಾರಿವೆ. (ಅನುಬಂಧದಲ್ಲಿ ಕೊಡಲಾಗಿದೆ) [2] ಅದರಲ್ಲಿ ಆದಿ ಪುರಾಣ ಸಂಗ್ರಹವನ್ನು ಮಾತ್ರ ಇಲ್ಲಿ ವಿಶೇಷವಾಗಿ ಅಧ್ಯಯನ ಮಾಡಲಾಗಿದೆ.

ಎಲ್. ಗುಂಡಪ್ಪನವರು ಹಳಗನ್ನಡ ವಿದ್ವಾಂಸರು, ಬಹುಭಾಷಾ ವಿದ್ವಾಂಸರು, ಕನ್ನಡ ಸಾಹಿತ್ಯದ ಹಿರಿಯ ತಲೆಮಾರಿನ ಶ್ರೇಷ್ಟ ವಿದ್ವಾಂಸರ ಸಾಲಿನಲ್ಲಿ ಗುರುತಿಸಲ್ಪಡುವ ಎಲ್. ಗುಂಡಪ್ಪ ಅವರು ವಿದ್ವತ್ತನ್ನೆ ವಿನಯವಾಗಿಸಿಕೊಂಡಿದ್ದ ಶ್ರೇಷ್ಠ ಸಾಹಿತಿಗಳು. ಭಾಷೆ – ಸಾಹಿತ್ಯ – ಸಂಸ್ಕೃತಿಗಳಲ್ಲಿನ ಬೇರುಗಳನ್ನು ಹುಡುಕುವ ಆಳವಾದ ಪಾಂಡಿತ್ಯ. ಕೋಶಕಾರರು ಆಗಿದ್ದು ವಿಸ್ತಾರವಾದ ಅಧ್ಯಯನಗಳ ಸಂಗಮವಾಗಿದ್ದ ಗುಂಡಪ್ಪನವರು ಸಂಸ್ಕೃತ. ಕನ್ನಡ. ಇಂಗ್ಲಿಷ್. ಭಾಷೆಗಳಲ್ಲಿ ಪರಿಣತರಾಗಿದ್ದರು. ಆದ್ದರಿಂದ ಜೈನಧರ್ಮವನ್ನು ಜೈನದ ಪ್ರಾಕೃತ, ಇಂಗ್ಲಿಷ್. ಕನ್ನಡ ಗ್ರಂಥಗಳನ್ನು ತೌಲನಿಕ ಅಧ್ಯಯನ ಮಾಡಿ ಈ ಸಂಗ್ರಹವನ್ನು ಸಿದ್ಧಪಡಿಸಿದ್ದಾರೆ.

ಸಾಮಾನ್ಯವಾಗಿ ಕನ್ನಡದಲ್ಲಿ ಕಾವ್ಯಗಳನ್ನು ಸಂಗ್ರಹಿಸಿದವರು ಸಾಕಷ್ಟು ವಿಸ್ತಾರವಾಗಿ ಪೀಠಿಕೆಗಳನ್ನು ಬರೆದು ಆಯಾ ಕಾವ್ಯಕೃತಿಯಲ್ಲಿ ಕಂಡುಬರುವ ಧರ್ಮದ ವಿಚಾರಗಳನ್ನು ಸಾಕಷ್ಟು ಚರ್ಚಿಸಿದ್ದರು. ಕನ್ನಡದ ಜೈನ ಕೃತಿಗಳ ಪೀಠಿಕೆಯಲ್ಲಿ ಎಲ್. ಗುಂಡಪ್ಪನವರು ಅದರಲ್ಲೂ ಸಂಗ್ರಹ ಕಾವ್ಯದ ಪೀಠಿಕೆಯಲ್ಲಿ ಜೈನಧರ್ಮವನ್ನು ಸಮಗ್ರವಾಗಿ ಪರಿಚಯ ಮಾಡಿಕೊಟ್ಟಂತೆ ಮತ್ತಾರು ಮಾಡಿಕೊಟ್ಟಿಲ್ಲ. ಇಂದಿಗೂ ಜೈನಧರ್ಮದ ಅಭ್ಯಾಸಿಗಳಿಗೆ ಆದಿ ಪುರಾಣ ಕಾವ್ಯ ಸಂಗ್ರಹ ಪೀಠಿಕೆಯಾಗಿದೆ.

ಈ ಹಿನ್ನೆಲೆಯಲ್ಲಿ ಕೇವಲ ಕಥಾವಸ್ತುವನ್ನಷ್ಟೇ ಅಲ್ಲದೆ ಜೈನಧರ್ಮದ ವಿಚಾರಗಳನ್ನು ಸ್ಪಷ್ಟವಾಗಿ ಗಮನಿಸಿ ಸಂಗ್ರಹವನ್ನು ಸಿದ್ಧಪಡಿಸಿರುವುದನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಪಂಪ ಮಹಾಕವಿಯ ಶ್ರೇಷ್ಠ ಕೃತಿ ಆದಿಪುರಾಣ. ಕನ್ನಡದಲ್ಲಿಯೇ ಅತಿ ಶ್ರೇಷ್ಠ ಕಾವ್ಯಕೃತಿಗಳಲ್ಲಿ ಒಂದಾದ ಅದರ ಸಂಗ್ರಹ ಕಾರ್ಯ ಅತಿ ಕಠಿಣವಾದದ್ದು ಈ ಕಾರ್ಯದಲ್ಲಿ ಎಲ್. ಗುಂಡಪ್ಪನವರ ಕೊಡುಗೆ ಏನೆಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

---

[2] ಎಲ್. ಗುಂಡಪ್ಪನವರ ಸಮಗ್ರ ಕೃತಿಗಳ ಪಟ್ಟಿ, ಸಂ.ಎಲ್.ಜಿ. ಸುಮಿತ್ರ

ಹೀಗೆ ಕನ್ನಡದಲ್ಲಿ ಜೈನ ಧರ್ಮದ ಹಿನ್ನೆಲೆಯುಳ್ಳ ಶ್ರೇಷ್ಠ ಕಾವ್ಯ ಸಂಗ್ರಹವೊಂದನ್ನು ಕೆ.ಎಲ್ ನರಸಿಂಹ ಶಾಸ್ತ್ರಿಗಳ 'ಆದಿಪುರಾಣಂ'ದೊಂದಿಗೆ ಹೋಲಿಸಿ ಎಲ್. ಗುಂಡಪ್ಪನವರ ಆದಿಪುರಾಣ ಸಂಗ್ರಹದ ವೈಶಿಷ್ಟ್ಯಗಳನ್ನು ಕನ್ನಡದಲ್ಲಿ ಗ್ರಂಥಸಂಪಾದನಾ ದೃಷ್ಟಿಯಿಂದ ಹಾಗೂ ಸಾಂಪ್ರದಾಯಿಕ ವಿಮರ್ಶಾ ದೃಷ್ಟಿಯಿಂದ ಸಂಗ್ರಹ ವಿಧಾನವನ್ನು ಚರ್ಚಿಸಲಾಗಿದೆ.

ಒಟ್ಟಾರೆಯಾಗಿ ಈ ಸಂಪ್ರಬಂಧವು ಎಲ್. ಗುಂಡಪ್ಪನವರ ಜೀವನ, ಶಿಕ್ಷಣ, ವೃತ್ತಿ, ಕನ್ನಡ ಗ್ರಂಥಸಂಪಾದನೆಯ ಸಂಕ್ಷಿಪ್ತ ಇತಿಹಾಸ, ಕನ್ನಡದಲ್ಲಿ ಆದಿಪುರಾಣ ಗ್ರಂಥ ಸಂಪಾದನೆ ಇದರ ಮುಖ್ಯ ಗ್ರಂಥಸಂಪಾದಕರ ಕುರಿತಂತೆ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆಗಳ ಬಗ್ಗೆ ಸೂಕ್ಷ್ಮ ನೋಟವನ್ನು ಕೊಟ್ಟು ಇವರು ಸಂಗ್ರಹ ಮಾಡಿರುವ 'ಆದಿಪುರಾಣ ಸಂಗ್ರಹ'ದ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನ ಇದಾಗಿದೆ.

# ಅಧ್ಯಾಯ –೨

## ಎಲ್. ಗುಂಡಪ್ಪನವರ ಜೀವನ ಪರಿಚಯ

೨೦ನೇ ಶತಮಾನದ ಹೊಸಗನ್ನಡ ಸಾಹಿತ್ಯ ವಿದ್ವಾಂಸರಲ್ಲಿ ಮೂರು ಬಗೆಯ ವಿಶೇಷ ವ್ಯಕ್ತಿಗಳನ್ನು ಕಾಣಬಹುದು. ಅದರಲ್ಲಿ ಶಾಲಾ ಶಿಕ್ಷಕರಾಗಿದ್ದು, ಘನವಿದ್ವಾಂಸರಾಗಿದ್ದ ವರ್ಗವನ್ನು ಕಾಣುತ್ತೇವೆ. ದೊಂಡೋ ನರಸಿಂಹ ಮುಳಬಾಗಿಲು, ಮ.ಪ್ರ. ಪೂಜಾರ, ಹೊಸಕೆರೆ ಚಿದಂಬರಯ್ಯ ಮುಂತಾದವರು ಹಾಗೆಯೇ ಮೊದಲಿಗೆ ಕನ್ನಡ ವಿಶ್ವವಿದ್ಯಾನಿಲಯ ಪ್ರಾರಂಭವಾದದ್ದು ಮದ್ರಾಸ್‌ನಲ್ಲಿ. ಎರಡನೆಯ ಹಂತದಲ್ಲಿ ಬಂದದ್ದು ಕನ್ನಡ ಪ್ರಾಕೃತ ವಿಶ್ವವಿದ್ಯಾನಿಲಯ.

ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಎಂ.ಎ. ಮಾಡಿರುವ ಬಿ.ಎಂ.ಶ್ರೀಕಂಠಯ್ಯ., ಟಿ.ಎಸ್. ವೆಂಕಣ್ಣಯ್ಯ, ದೇವಶಿಖಾಮಣಯ್ಯ, ಅಳಸಿಂಗಾಚಾರ್ಯ. ಟಿ.ಎನ್. ಸುಬ್ಬರಾಯ ಶಾಸ್ತ್ರಿ ಕಂಡು ಬರುತ್ತಾರೆ. ನಂತರ ಮೈಸೂರು ವಿಶ್ವವಿದ್ಯಾನಿಲಯ ಪ್ರಾರಂಭವಾದ ಮೇಲೆ ಬಿ.ಎಂ.ಶ್ರೀಕಂಠಯ್ಯ, ಟಿ.ಎಸ್. ವೆಂಕಣ್ಣಯ್ಯ ನೇತೃತ್ವದಲ್ಲಿ ಒಂದು ವಿಶೇಷ ಪಡೆಯೇ ನಿರ್ಮಾಣವಾಯಿತು. ಈ ತಲೆಮಾರಿನಲ್ಲಿ ಬಂದ ವಿದ್ವಾಂಸರಲ್ಲಿ ಅಗ್ರಗಣ್ಯರಾದ ಎಲ್. ಗುಂಡಪ್ಪನವರು ಒಬ್ಬರು.

### ಅ. ಜೀವನ ಪರಿಚಯ

ಕನ್ನಡದಲ್ಲಿ ಬಿ.ಎಂ.ಶ್ರೀ.. ಎಂ.ಆರ್.ಶ್ರೀ, ತೀ.ನಂ.ಶ್ರೀ.. ಅವರು ಶ್ರೀತ್ರಯರೆಂದು, ಸಿದ್ಧವನಹಳ್ಳಿ ಕೃಷ್ಣಶರ್ಮ, ತಿರುಮಲೆ ತಾತಾಚಾರ್ಯ ಶರ್ಮ, ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಅವರು ಶರ್ಮತ್ರಯರೆಂದೂ ಪು.ತಿ.ನರಸಿಂಹಚಾರ್, ಡಿ.ಎಲ್. ನರಸಿಂಹಾಚಾರ್, ಆರ್. ನರಸಿಂಹಾಚಾರ್ ನರಸಿಂಹತ್ರಯರೆಂದೂ ಪ್ರಸಿದ್ಧರಾಗಿರುವಂತೆಯೇ ಡಿ.ವಿ.ಗುಂಡಪ್ಪ, ಎಲ್. ಗುಂಡಪ್ಪ, ವೈ.ಎಸ್.ಗುಂಡಪ್ಪ ಅವರು ಗುಂಡಪ್ಪತ್ರಯರೆಂದು ಪ್ರಸಿದ್ಧರಾಗಿದ್ದಾರೆ.[೩]

ಇವರಲ್ಲಿ ಒಬ್ಬರಾದ ಎಲ್. ಗುಂಡಪ್ಪನವರು ಗಣ್ಯ ಅಧ್ಯಾಪಕರು, ಸಮರ್ಥ ಅನುವಾದಕರು, ದಕ್ಷ ಸಂಪಾದಕರು, ಪರಿಣತ ನಿಘಂಟು ತಜ್ಞರು, ಪ್ರತಿಭಾವಂತ ಕವಿಗಳು ಆಗಿ, ಹೊಸಗನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಗಳನ್ನಿತ್ತ ಬಿ.ಎಂ.ಶ್ರೀ.. ಅವರ ಗಣ್ಯ ಶಿಷ್ಯರಲ್ಲಿ ಒಬ್ಬರಾಗಿದ್ದಾರೆ.

---

[3] ಪ್ರೊ. ಜಿ. ಅಶ್ವತ್ಥನಾರಾಯಣರ ಲೇಖನ, ಪುಟ ೧ (ಅಪ್ರಕಟಿತ)

ಎಲ್. ಗುಂಡಪ್ಪನವರು ಸಾತ್ವಿಕ ದಂಪತಿಗಳಾದ ಲಿಂಗಣ್ಣಯ್ಯ ಮತ್ತು ಚೆನ್ನಮ್ಮನವರ ಮಗನಾಗಿ ಜನವರಿ ೮, ೧೯೦೩ರಲ್ಲಿ ಜನಿಸಿದರು. ಇವರ ಜನ್ಮ ಸ್ಥಳ ಹಾಸನ ಜಿಲ್ಲೆಯ ಹಳೇಬೀಡಿನ ಸಮೀಪ ಮತಿಘಟ್ಟ. ತಂದೆ ಲಿಂಗಣ್ಣಯ್ಯನವರಿಗೆ ಇಬ್ಬರು ಸೋದರರು, ಒಬ್ಬ ಸೋದರಿ. ದೊಡ್ಡಪ್ಪ, ದೊಡ್ಡಮ್ಮ, ಚಿಕ್ಕಪ್ಪ, ಚಿಕ್ಕಮ್ಮ ಅತ್ತೆ ಮಾವಂದಿರು ಅವರ ಮಕ್ಕಳುಗಳು ಹಾಗೂ ಗುಂಡಪ್ಪನವರ ಸೋದರ ಸೋದರಿಯರು ಇದ್ದ ತುಂಬು ಕುಟುಂಬ 'ದಾನದ ಮನೆ' ಎಂದೇ ಹೆಸರಾಗಿದ್ದ ವೈದಿಕ ಮನೆತನ.

ಇಂತಹ ಶುದ್ಧ ವೈದಿಕ ನಿಷ್ಠೆಯಲ್ಲಿ ಬಾಲ್ಯವನ್ನು ಕಳೆದು, ಮನೆಯ ಧಾರ್ಮಿಕ ವಾತಾವರಣದ ಜೊತೆಗೆ ತುಂಬು ಕುಟುಂಬದಲ್ಲಿ ಬೆಳೆದರು. ೧೯೧೨ ರಿಂದ ೧೯೧೪ ರ ತನಕ ಬೆಳವಾಡಿ ಮತ್ತು ಕಳಸಾಪುರಗಳಲ್ಲಿ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ, ೧೯೧೫ ರಿಂದ ೧೯೧೯ ತನಕ ಬೇಲೂರಿನ ಆಗಿನ ವಿ.ವಿ. ಸ್ಕೂಲ್ ನಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡು ಭಾಷೆಗಳಲ್ಲೂ ಮಾಧ್ಯಮಿಕ ವಿದ್ಯಾಭ್ಯಾಸವನ್ನು ಮಾಡಿದರು. (ಈ ಶಿಕ್ಷಣವನ್ನು ಆಗ ಎಲ್.ಎಸ್. ಎಂದು ಕರೆಯುತ್ತಿದ್ದರು.

ಗುಂಡಪ್ಪನವರ ತಂದೆ ಲಿಂಗಣ್ಣಯ್ಯನವರು ಉದ್ಯೋಗದಲ್ಲಿ ತೋಟಗಾರಿಕೆ ಮತ್ತು ವ್ಯವಸಾಯವನ್ನು ಅವಲಂಬಿಸಿದ್ದರು. ಇವರ ಪ್ರೇರಣೆಯಿಂದಾಗಿ ಕೃಷಿಕ ಇಲಾಖೆಯಲ್ಲಿ ಕೆಲವು ದಿನ ಕೆಲಸ ಮಾಡಿದ್ದರು. ಇಂತಹ ಕೃಷಿಕ ಸಾಹಿತಿಗಳಲ್ಲಿ ಕನ್ನಡದಲ್ಲಿ ರಾವ್ ಬಹದ್ದೂರ್. ಬಿ.ಆರ್. ರಂಗಸ್ವಾಮಿಯವರನ್ನು ಕಾಣಬಹುದು. ಇವರಲ್ಲಿ ಎಲ್ ಗುಂಡಪ್ಪನವರು ಒಬ್ಬರು.

ಕೃಷಿಕರಾಗಿದ್ದರೂ ತಂದೆ ಲಿಂಗಣ್ಣಯ್ಯ ವೇದಾಧ್ಯಯನವನ್ನು ಮಾಡಿದ್ದುದರಿಂದ ಗುಂಡಪ್ಪನವರು ಆಧುನಿಕ ಶಿಕ್ಷಣದೊಂದಿಗೆ ವೇದಾಧ್ಯಯನವನ್ನೂ ಸ್ಥಳೀಯ ಪಂಡಿತರಿಂದ ಸಂಸ್ಕೃತವನ್ನೂ ಕಲಿತಿದ್ದರು. ಹಾಗೆಯೇ ಬೇಲೂರಿನ ವಿ.ವಿ. ಸ್ಕೂಲಿನಲ್ಲಿ ಸಂಸ್ಕೃತ ಸಾಹಿತ್ಯಾಧ್ಯಯನವನ್ನು ಮಾಡುವುದರ ಜೊತೆಗೆ ವೇದಾಧ್ಯಯನವನ್ನು ಕೂಡ ಮುಂದುವರಿಸಿದರು.

ಗುಂಡಪ್ಪನವರ ಜೀವನ ಚರಿತ್ರೆಯನ್ನು ಬರೆದಿರುವ ಅವರ ಮಗಳು ಕಮಲಾಬಾಯಿ ಈ ರೀತಿ ಹೇಳುತ್ತಾರೆ. "ಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಎಲ್.ಗುಂಡಪ್ಪನವರು ಕವಿ ಆಗಿಬಿಟ್ಟಿದ್ದರು. ಹೈಸ್ಕೂಲಿಗೆ ಬರುವ ವೇಳೆಗೆ ಸುಮಾರು ೩೦೦ ಕವನಗಳನ್ನು ಬರೆದಿದ್ದರೆಂದು" ಹೇಳಿದ್ದಾರೆ. ಷಟ್ಪದಿ, ತ್ರಿಪದಿ, ಕಂದ ಮೊದಲಾದ ಛಂದಸ್ಸುಗಳಲ್ಲಿ ಕವಿತೆ ರಚಿಸುವ ಪಾಂಡಿತ್ಯ ಆಗಲೇ ಅವರಿಗೆ ಸಿದ್ಧಿಸಿತ್ತು. ಕನ್ನಡ ಕಾವ್ಯಗಳ ಅಭ್ಯಾಸ ಮಾಡಿದ್ದರು.

೧೯೨೫ ರಲ್ಲಿ ಗುಂಡಪ್ಪನವರು ಚಿಕ್ಕಮಂಗಳೂರಿನಲ್ಲಿ ಸಂಸ್ಕೃತ ಅಧ್ಯಯನದಲ್ಲಿ ಪ್ರೌಢಶಾಲಾ ವ್ಯಾಸಂಗ ಮಾಡುತ್ತಿದ್ದಂತಹ ಸಂದರ್ಭದಲ್ಲಿ ಇವರಲ್ಲಿರುವ ಪ್ರತಿಭೆಯನ್ನು ತೋರ್ಪಡಿಸಲು ಒಂದು ಸದವಕಾಶ ದೊರೆಯಿತು. ಚಿಕ್ಕಮಂಗಳೂರಿಗೆ ಆಗಮಿಸಿದ್ದ ಶೃಂಗೇರಿ ಜಗದ್ಗುರುಗಳಾದ ಶ್ರೀ ಚಂದ್ರಶೇಖರ ಭಾರತಿ ಸ್ವಾಮಿಗಳ ಮುಂದೇ ತಾವೇ ರಚಿಸಿದ್ದ ಸಂಸ್ಕೃತ ಸ್ವಾಗತ ಗೀತೆಯನ್ನು ಹಾಡಿದಾಗ ಇವರ ಪಾಂಡಿತ್ಯವನ್ನು ಮೆಚ್ಚಿ ಇವರ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಶ್ರೀ ಮಠದಿಂದ ಪ್ರೋತ್ಸಾಹ ಧನ ನೀಡಿದರು. ಇದರ ಸಹಾಯದಿಂದ ಮೈಸೂರಿನಲ್ಲಿ ಐದು ವರ್ಷಗಳವರೆಗೆ ಉನ್ನತ ವ್ಯಾಸಂಗ ಮಾಡಿ ೧೯೨೮ ರಲ್ಲಿ ಬಿ.ಎ. ಪದವಿ, ೧೯೩೦ ರಲ್ಲಿ ಕನ್ನಡ ಎಂ.ಎ. ಪದವಿಯನ್ನು ಪಡೆದರು. ಹೀಗೆ ವಿದ್ಯಾರ್ಥಿವೇತನಗಳಿಂದಲೇ ಶಿಕ್ಷಣ ಮುಂದುವರಿಸಿದ ಪ್ರತಿಭಾವಂತ ವಿದ್ಯಾರ್ಥಿ ಗುಂಡಪ್ಪನವರಾಗಿದ್ದರು.

ಕನ್ನಡ ಸಾಹಿತ್ಯದ ಪುನರುಜ್ಜೀವನ ಕೇಂದ್ರವಾಗಿದ್ದ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ಚಟುವಟಿಕೆಗಳು ಆಚಾರ್ಯ ಬಿ.ಎಂ.ಶ್ರೀಯವರ ನೇತೃತ್ವದಲ್ಲಿ ಚಿಗುರೊಡೆಯುತ್ತಿತ್ತು. ಕನ್ನಡ ಎಂ.ಎ. ತರಗತಿಯ ಎರಡನೆಯ ತಂಡದಲ್ಲಿ ಗುಂಡಪ್ಪನವರು ವಿದ್ಯಾರ್ಥಿಯಾಗಿದ್ದರು. ಕುವೆಂಪು ಅವರು ಮೊದಲ ತಂಡದಲ್ಲಿದ್ದರು. ಇಂತಹ ಪ್ರತಿಕೂಲ ಸಾಹಿತ್ಯ ವಾತಾವರಣದಿಂದಾಗಿ ಇವರಲ್ಲಿದ್ದ ಪ್ರತಿಭೆ ಹೊರಬರಲು ರಾಜಮಾರ್ಗ ದೊರಕಿತು. ಇದರಿಂದ ಪ್ರೇರಿತರಾಗಿ ಕವಿತೆಗಳನ್ನು ರಚಿಸಿ ಗುರುಗಳು – ಸ್ನೇಹಿತರಿಂದ ಮೆಚ್ಚುಗೆ ಪಡೆದರು. ಅಂದಿನ ಉತ್ಸಾಹಿ ವಿದ್ಯಾರ್ಥಿಗಳು ಬಿ.ಎಂ. ಶ್ರೀಕಂಠಯ್ಯನವರಿಗೆ 'ಕಿರಿಯ ಕಾಣಿಕೆಯನ್ನು' ಅರ್ಪಿಸಿದರು. ಹೀಗೆ ಕಾಣಿಕೆ ಅರ್ಪಿಸಿದ ಆಧುನಿಕ ಕವಿ ಬಳಗದಲ್ಲಿ ಗುಂಡಪ್ಪನವರೂ ಒಬ್ಬರಾದರು. ಮೊದಲಿಗೆ ಕವಿಯಾಗಿ ಕಾಣಿಸಿಕೊಂಡರೂ ಮುಂದೆ ವಿದ್ವಾಂಸರಾದರು ಬಿ.ಎಂ.ಶ್ರೀಕಂಠಯ್ಯ.. ತೀ.ನಂ.ಶ್ರೀಕಂಠಯ್ಯ. ಎ.ಆರ್.ಕೃಷ್ಣ ಶಾಸ್ತ್ರಿ, ಟಿ.ಎಸ್. ವೆಂಕಣ್ಣಯ್ಯನವರಂಥ ಘನವಿದ್ವಾಂಸ ಗುರುಗಳ ಗರಡಿಯಲ್ಲಿ ಪಳಗಿದ ಶಿಷ್ಯರಾದರು. ತಮ್ಮ ವಿದ್ವತ್ತಿನ ಸಾಧ್ಯತೆಯಿಂದ ಅವರ ಮಾರ್ಗದಲ್ಲೇ ಮುನ್ನಡೆದು ತಾವು ಕೂಡ ಅಂತಹ ಗುರುವರ್ಯರ ಸ್ಥಾನದಲ್ಲಿ ನಿಲ್ಲುವ ಅರ್ಹತೆಯನ್ನು ಗಳಿಸಿಕೊಂಡ ಶ್ರೇಷ್ಠ ವಿದ್ವಾಂಸರಾಗಿದ್ದಾರೆ.[4]

ಎಂ.ಎ. ವ್ಯಾಸಂಗದ ನಂತರ ಅಕ್ಕಿಹೆಬ್ಬಾಳಿನ ಶಾರದಮ್ಮರವರನ್ನು ಮದುವೆಯಾದರು. ಐದು ಜನ ಹೆಣ್ಣುಮಕ್ಕಳು, ಇಬ್ಬರು ಗಂಡು ಮಕ್ಕಳ ತಂದೆಯಾಗಿ ತುಂಬು ಕುಟುಂಬದ ಹೊಣೆ ಇವರ ಮೇಲಿದ್ದರೂ ಮಕ್ಕಳಿಗೆ ಉನ್ನತ ವ್ಯಾಸಂಗ ಮಾಡಿಸಿ, ವಿದೇಶಗಳಿಗೂ ಕಳುಹಿಸಿ ಉತ್ತಮ ಹುದ್ದೆಗಳನ್ನು ಪಡೆದು ಜೀವನದಲ್ಲಿ ಸುಭದ್ರನೆಲೆಗಳನ್ನು ಕಂಡುಕೊಳ್ಳುವಲ್ಲಿ ಸಹಾಯಕರಾಗಿ ಒಬ್ಬ ಜವಾಬ್ದಾರಿಯುತ ತಂದೆಯಾಗುವುದರ ಜೊತೆಗೆ ಸೋದರರ ಮಕ್ಕಳ ವಿದ್ಯಾಭ್ಯಾಸಕ್ಕೂ ನೆರವಾಗಿ ತಮ್ಮ ಸೌಹಾರ್ದತೆಯನ್ನು ಮೆರೆದರು.

---

[4] ಹಸ್ತಪ್ರತಿ ಅಧ್ಯಯನ ಶಾಸ್ತ್ರ, ನಾ.ಗೀತಾಚಾರ್ಯ. ಪುಟ ೩೮

ಗುಂಡಪ್ಪನವರ ಮಕ್ಕಳು ಸಾಹಿತ್ಯ – ವಿಜ್ಞಾನ ಕ್ಷೇತ್ರದಲ್ಲಿ ಎಂ.ಎ. ಪಿಎಚ್.ಡಿ. ಪದವಿ ಪಡೆದವರಾಗಿದ್ದರೂ ಕರ್ನಾಟಕ ಸಂಗೀತ, ಭಾಗಗೀತೆಗಳಲ್ಲಿ ತರಬೇತಿ ಪಡೆದು ತಂದೆಯವರ ಜಾನಪದ ಹಾಡುಗಳನ್ನು ಸಂಗ್ರಹಿಸಿ 'ಎಲ್.ಜಿ.ಸಿಸ್ಟರ್ಸ್' ಹೆಸರಿನ ಸಂಗೀತ ಕಲಾವಿದರಾಗಿ ಹೆಸರು ಮಾಡಿದ್ದಾರೆ ಹಾಗೂ ಇವರೊಬ್ಬ ಪ್ರಗತಿಪರ ಚಿಂತಕರಾಗಿದ್ದು ಮಕ್ಕಳ ಮುಖಾಂತರ ವಿದೇಶಿ ಪ್ರವಾಸಮಾಡಿ ಅಲ್ಲಿ ಭಾರತೀಯ ಸಂಸ್ಕೃತಿಯ ಬಗ್ಗೆ ಉಪನ್ಯಾಸ ನೀಡಿರುವುದನ್ನು ನೋಡಿದಾಗ ಭಾರತೀಯ ಸಂಸ್ಕೃತಿಯ ಮೇಲಿದ್ದ ವ್ಯಾಮೋಹ, ಶ್ರದ್ಧೆ, ಕಾಳಜಿ ಎಷ್ಟಿತ್ತೆಂಬುದು ಅರಿವಾಗುತ್ತದೆ.

ಎಲ್. ಗುಂಡಪ್ಪನವರು ಎಂ.ಎ ಪದವೀಧರರಾಗಿ ಉನ್ನತ ಉದ್ಯೋಗಕ್ಕೆ ಅರ್ಹರಾಗಿದ್ದರೂ ೧೯೩೩ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವ್ಯವಸಾಯ ಶೋಧಕ ಸಂಘದ 'ವ್ಯವಸಾಯ ಪತ್ರಿಕೆ'ಯಲ್ಲಿ ಸಂಪಾದಕರಾಗಿ ಸೇವೆ ಸಲ್ಲಿಸಿರುವುದು ಇವರ ಸರಳತೆಗೆ ನೈಜ ಉದಾಹರಣೆಯಾಗಿದೆ. ನಂತರ ಭಾಷಾಂತರ ಕಾರ್ಯದಲ್ಲಿ ತೊಡಗಿ ೧೯೪೨ರವರೆಗೆ ಇಂಗ್ಲಿಷ್ – ಕನ್ನಡ ನಿಘಂಟು ಕಚೇರಿಗೆ ಎರವಲು ಸೇವೆಗಾಗಿ ಬಂದು ೧೯೮೮ರಲ್ಲಿ ಅಧ್ಯಾಪಕ ವೃತ್ತಿಯಿಂದ ನಿವೃತ್ತರಾದರೂ ನಿಘಂಟು ಇಲಾಖೆಯಲ್ಲಿ ೧೯೬೩ರ ವರೆಗೂ ಸಂಪಾದಕರಾಗಿ ಸೇವೆ ಸಲ್ಲಿಸಿದರು. ನಂತರ ೧೯೬೬ರವರೆಗೆ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಕೆಲಸ ನಿರ್ವಹಿಸಿ ಪತ್ರಿಕಾ ನಿಘಂಟನ್ನು ಸಂಪಾದಿಸಿದ್ದಾರೆ. ಕನ್ನಡದಲ್ಲಿ ನೂರಾರು ನಿಘಂಟುಗಳಿವೆ. ಅವುಗಳಲ್ಲಿ ಏಕಭಾಷಾ ನಿಘಂಟುಗಳು, ದ್ವಿಭಾಷಾ ನಿಘಂಟುಗಳು ಎಂದು ಎರಡು ಬಗೆಗಳಿವೆ. ಗುಂಡಪ್ಪನವರು ಎರಡು ಬಗೆಯ ನಿಘಂಟುಗಳನ್ನು ಸಂಪಾದಿಸಿದ್ದಾರೆ. ೧೯೭೨ರ ವರೆಗೆ ಬಿ.ಎಂ.ಎಸ್. ಮಹಿಳಾ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ಗಾಂಧಿ ಶತಮಾನೋತ್ಸವ ಸ್ಮರಣ ಸಂಚಿಕೆಯ ಸಂಪಾದಕರಾಗಿ 'ಕರ್ನಾಟಕ ಪರಂಪರೆ (Karnataka through the age) ಯ ಭಾಷಾಂತರ ಸಮಿತಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿರುವುದರ ಜೊತೆಗೆ ಈ ಸಂಪುಟದ ಹಲವಾರು ಲೇಖನಗಳನ್ನು ಭಾಷಾಂತರ ಮಾಡಿದ್ದಾರೆ.

ಪರಿಷತ್ತಿನ ನಿಘಂಟು ಕಚೇರಿಯಲ್ಲಿ ಕಾವ್ಯ ನಿರತರಾಗಿದ್ದಾಗ ಮೋಟಗಾನಹಳ್ಳಿ, ಸುಬ್ರಹ್ಮಣ್ಯ ಶಾಸ್ತ್ರಿಗಳ ಜೊತೆ ಸೇರಿ ಮುಮ್ಮಡಿ ಕೃಷ್ಣರಾಜ ಒಡೆಯರ್ ರಚಿಸಿದ ಸಂಸ್ಕೃತ ಕನ್ನಡದ ಚಾಮುಂಡಿಕಾ ಲಘು ನಿಘಂಟನ್ನು ಸಂಪಾದಿಸಿ ಪರಿಷತ್ ಪತ್ರಿಕೆಯಲ್ಲಿ ಪ್ರಕಟಿಸಿದರು. ಕೋರಿಕಾಗದದ ಏಕಪ್ರತಿಯನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಗುಂಡಪ್ಪನವರು ಹೇಳಿಕೊಂಡಂತೆ "ಈ ಪ್ರತಿಯನ್ನು ಪ್ರಕಟಿಸುವಲ್ಲಿ ಸಂಪಾದಕರು ಮಾಡಿರುವ ಕಾರ್ಯವೆಂದರೆ ಪ್ರತಿ ಮಾಡುವುದರಲ್ಲಿ ತಲೆದೋರಿರ ಬಹುದಾದ ಅಕ್ಷರ ಸ್ಖಾಲಿತ್ಯ ಮೊದಲಾದ ಸಣ್ಣಪುಟ್ಟ ತಪ್ಪುಗಳನ್ನು ಮಾತ್ರ ತಿದ್ದಲಾಗಿದೆ". ಇದರ ಜೊತೆಗೆ ಸಂಸ್ಕೃತ ಕನ್ನಡ ಪದಗಳ ಅಕಾರಾದಿ ಪಟ್ಟಿಕೆ ಕೊಟ್ಟಿರುವುದು ಉಪಯುಕ್ತವಾಗಿದೆ. ೧೮೮೪ರಲ್ಲಿ ಚಕ್ರವರ್ತಿ ಅಯ್ಯಂಗಾರ್ ಅವರಿಂದ

ಪ್ರಕಟವಾಗಿರುವ ಶ್ರೀ ಚಾಮುಂಡಿಕಾ ಲಘು ನಿಘಂಟು ಇನ್ನೊಂದು ಪ್ರತಿ ಪ್ರಕಟವಾಗಿರುವುದು ಇವರ ಗಮನಕ್ಕೆ ಬಂದಿಲ್ಲ. ಬಂದಿದ್ದರೆ ಈ ನಿಘಂಟು ಸಂಪಾದನೆ ಇನ್ನು ಉತ್ತಮಗೊಳ್ಳುತ್ತಿತ್ತು" ಎಂದು ಹೇಳಿದ್ದಾರೆ.

ಆರ್.ಆರ್. ದಿವಾಕರರು ೨೫-೦೩-೧೯೫೯ರಲ್ಲಿ ಪತ್ರಿಕಾ ಸಂಪಾದಕರ ಕನ್ನಡ ಪದಪ್ರಯೋಗಾಸಕ್ತರ ಸಭೆಯೊಂದನ್ನು ಕರೆದು ಪತ್ರಿಕಾ ನಿಘಂಟೊಂದನ್ನು ಸಿದ್ಧಪಡಿಸಲು ಸಾಮಾನ್ಯವಾಗಿ ಬಳಸುವ ಸಾವಿರ ಶಬ್ದಗಳ ಸಂಗ್ರಹ - ಪ್ರಯೋಗಗಳಿರುವ ಸಂಗ್ರಹವನ್ನು ಪರಿಷ್ಕರಿಸಿ ಸಂಪಾದಿಸಿಕೊಡಲು ಎಲ್. ಗುಂಡಪ್ಪನವರಿಗೆ ವಹಿಸಿದರು. (ಇಂಗ್ಲಿಷ್ ಪದಗಳಿಗೆ ಸಮಾನಾರ್ಥಕ ಕನ್ನಡ ಪದಗಳನ್ನು ಕೊಡುವುದು ಪತ್ರಿಕಾ ನಿಘಂಟಿನ ಗುರಿಯಾಗಿತ್ತು). ೨೦೫೦ ಪದಗಳ ಪತ್ರಿಕಾ ನಿಘಂಟನ್ನು ಸುಮಾರು ಆರು ವರ್ಷಗಳ ಸತತ ಪರಿಶ್ರಮದಿಂದ ಹೊರತಂದರು. ಇದು ಕನ್ನಡದ ಮೊದಲ ಪತ್ರಿಕಾ ನಿಘಂಟಾಗಿದೆ. ೩೩ ವರ್ಷಗಳ ನಂತರ ಜಿ. ವೆಂಕಟಸುಬ್ಬಯ್ಯನವರು ಪತ್ರಿಕಾ ಅಕಾಡೆಮಿಗಾಗಿ ಪತ್ರಿಕಾ ಪದಕೋಶವನ್ನು ರಚಿಸುವಾಗಿ ಎಲ್. ಗುಂಡಪ್ಪನವರ ಪತ್ರಿಕಾ ನಿಘಂಟನ್ನೇ ಅನುಸರಿಸಿದ್ದಾರೆ. ಪತ್ರಿಕಾ ನಿಘಂಟಿನ ಪದಗಳೆಲ್ಲಾ ಪತ್ರಿಕಾ ಪದಕೋಶದಲ್ಲಿ ಬಂದಿಲ್ಲದಿರುವುದರಿಂದ ಇದರ ಉಪಯುಕ್ತತೆ ಇಂದಿಗೂ ಇದೆ. ಹಾಗಾಗಿ ೨೦ನೇ ಶತಮಾನದ ಕನ್ನಡದ ಪ್ರಸಿದ್ಧ ನಿಘಂಟುಕಾರ, ಆಧುನಿಕ ಪತ್ರಿಕಾ ನಿಘಂಟನ್ನು ಯಶಸ್ವಿಯಾಗಿ ಕನ್ನಡಕ್ಕೆ ಕೊಟ್ಟ ಕೀರ್ತಿ ಗುಂಡಪ್ಪನವರಿಗೆ ಸಲ್ಲಬೇಕು.

ಗುಂಡಪ್ಪನವರು ಸರಳ ಸಜ್ಜನಿಕೆಗೆ ಕನ್ನಡಿಯಂತಿದ್ದರು. ಇದಕ್ಕೊಂದು ಉತ್ತಮ ನಿದರ್ಶನವೆಂದರೆ ಗುಂಡಪ್ಪನವರು ಗಾಂಧಿ – ಖಾದಿ ಭಕ್ತರಾಗಿದ್ದರು. ಸದಾ ಖಾದಿಧಾರಗಳಾಗಿ ಕಚ್ಚೆ ಪಂಚೆಯ ಮೇಲೆ ಖಾದಿ ಜುಬ್ಬ, ಮೇಲೊಂದು ಶಲ್ಯ ಅವರ ಸರಳ ಉಡುಗೆಯಾಗಿತ್ತು. ವಿದ್ವತ್ತಿನ ಶಿಖರವಾಗಿದ್ದ ಗುಂಡಪ್ಪನವರು ಕುಳ್ಳಗಿದ್ದರೂ ಬಹಳ ಎತ್ತರದ ವ್ಯಕ್ತಿತ್ವದವರಾಗಿದ್ದರು. ವಿದೇಶಕ್ಕೆ ಹೋದಾಗಲೂ ಅವರು ಧಾರ್ಮಿಕಾಸಕ್ತಿಯನ್ನು ತೊರೆಯಲಿಲ್ಲ. ಅವರ ವಸ್ತ್ರ ಸ್ವದೇಶಿ ಆಗಿತ್ತು. ಅಮೆರಿಕಾದಲ್ಲಿ ಗುಂಡಪ್ಪನವರಿದ್ದಾಗ ಬೆನ್‌ಕಿಂಗ್ಸ್ ನಟಿಸಿದ್ದ ಗಾಂಧಿ ಚಲನಚಿತ್ರ ಎಲ್ಲೆಡೆ ಜನಪ್ರಿಯವಾಗಿತ್ತು. ಬೊಕ್ಕತಲೆಯ, ಗುಂಡುಮುಖದ ಖಾದಿವಸ್ತ್ರಧಾರಿ ಗುಂಡಪ್ಪನವರನ್ನು ಜನ ಗಾಂಧಿ ಎಂದೇ ಭಾವಿಸಿದರು. ಅಮೆರಿಕಾದಲ್ಲಿ ಮ್ಯಾಕ್ಸ್ ಮುಲ್ಲರರ ಋಗ್ವೇದ ಸಂಪುಟಗಳನ್ನು ಅಧ್ಯಯನ ಮಾಡಿದ ಅವರು ಪ್ರತಿದಿನ ಒಂದು ಗಂಟೆ ರಾಮಾಯಣ, ಭಾರತ, ಭಾಗವತಗಳಲ್ಲಿ ಯಾವುದಾದರೊಂದು ಭಾಗವನ್ನು ಪಾರಾಯಣ ಮಾಡುತ್ತಿದ್ದರು."[5]

---

[5] ಪ್ರೊ.ಜಿ. ಅಶ್ವತ್ಥನಾರಾಯಣರವರ ಲೇಖನ ಪುಟ ೧೩

ಮೃದು ಮೆಲು ಮಾತಿನ ಹಿಂದೆ ನಿಖರ, ನಿಶ್ಚಿತ, ಖಚಿತ, ಧ್ವನಿಯಿತ್ತು., ತಮಗೆ ಅನಿಸಿದ್ದನ್ನು ನೇರವಾಗಿ ಹೇಳುವ, ನೇರ ನಡೆ ನುಡಿಯ ಗಾಂಧಿವಾದಿಗಳಾಗಿದ್ದರು. ಸೀತಾರಾಮಯ್ಯನವರು ಗೋವಿಂದರಾಜ್ ಅವರೊಂದಿಗೆ ತಿರುಕ್ಕುರಳ್ ಅನುವಾದವನ್ನು ಪರಿಷ್ಕರಿಸುತ್ತಿರುವ ವಿಚಾರ ತಿಳಿದು ಈಗಾಗಲೇ ಒಂದೆರಡು ಅನುವಾದಗಳು ಬಂದಿರುವಾಗ ಮತ್ತೊಂದು ಏಕೆ ಬೇಕು ಎಂದು ದೃಢವಾಗಿ ಹೇಳಿದ್ದರು.

ಜೀವನದಲ್ಲಿ, ಆಚಾರದಲ್ಲಿ ಸಂಪ್ರದಾಯವನ್ನು, ವಿಚಾರದಲ್ಲಿ ಆಧುನಿಕತೆಯನ್ನು ಅಂಗೀಕರಿಸಿದವರು ಗುಂಡಪ್ಪನವರು. ಬಾಲ್ಯ ವಿವಾಹವನ್ನು ವಿರೋಧಿಸಿ, ಹೆಣ್ಣುಮಕ್ಕಳಿಗೆ ಗಂಡುಮಕ್ಕಳಿಗೆ ಕೊಡಿಸುವ ಹಾಗೆಯೇ ಉನ್ನತ ವಿದ್ಯಾಭ್ಯಾಸ ನೀಡಬೇಕೆಂಬ ಧ್ಯೇಯವುಳ್ಳವರಾಗಿದ್ದರು. ಇದಕ್ಕೆ ಸಂಬಂಧಿಸಿದಂತೆ ಹಾ.ಮಾ. ನಾಯಕ್ ರು ಈ ರೀತಿ ಹೇಳಿದ್ದಾರೆ.

"ಗುಂಡಪ್ಪನವರ ವೇಷಭೂಷಣದಲ್ಲಿ ಅವರ ವ್ಯಕ್ತಿತ್ವ ಎದ್ದು ಕಾಣುತ್ತಿತ್ತು. ಕಚ್ಚೆ ಪಂಚೆ, ಬಿಳಿಯ ಖಾದಿ ಅಂಗಿ, ಹೆಗಲ ಮೇಲೊಂದು ಶಲ್ಯ ಅಥವಾ ಟವಲ್ಲು, ಗಿಡ್ಡ ಆಳು, ಬೋಳುತಲೆ, ಗುಂಡು ಮುಖ, ತೆಳುವಾದ ಮೋಹಕನಗು" – ಇದು ಬಾಹ್ಯ ಚಿತ್ರ.

"ವಿದ್ವತ್ತು, ವಿವಿಧ ಭಾಷೆಗಳ ಪರಿಣತಿ, ಮೃದುಮಾತು, ಸೌಜನ್ಯ, ವಿನಯ, ಸ್ನೇಹಾಂತಃಕರಣ, ಕುಟುಂಬ ವಾತ್ಸಲ್ಯ ಇದು ಅವರ – ಅಂತರಂಗದ ಸತ್ತ್ವ" ಎಂದಿದ್ದಾರೆ. ಈ ನುಡಿಗಳು ಅಕ್ಷರಶಃ ನಿಜವೆನಿಸುತ್ತದೆ.[೬]

ಹೀಗೆ ಎಲ್.ಗುಂಡಪ್ಪನವರು ಅತ್ಯಂತ ಆಳವಾದ ಪಾಂಡಿತ್ಯವನ್ನು ಸಂಪಾದಿಸಿ, ಪ್ರಾಚೀನ ಭಾಷೆ, ಸಾಹಿತ್ಯಗಳ ಅಧಿಕೃತ ಪ್ರತಿನಿಧಿಗಳಾಗಿದ್ದ ಅಪರೂಪದ ವಿದ್ವಾಂಸರಾಗಿದ್ದರು. ಸರಳ ಜೀವನ ನಡೆಸಿ ಜೀವನದುದ್ದಕ್ಕೂ ಸ್ವಾವಲಂಬಿಗಳಾಗಿ, ಖಾದಿಧಾರಿಗಳಾಗಿದ್ದರು. ಇಂತಹ ಜೀವನೋತ್ಸಾಹಿ ಸಾಹಿತಿ, ವಿದ್ವಾಂಸ, ಸದ್ಗೃಹಸ್ಥ ಗಣ್ಯ ಅಧ್ಯಾಪಕ, ಸಮರ್ಥ ಅನುವಾದಕ, ದಕ್ಷ ಸಂಪಾದಕ, ಪ್ರತಿಭಾವಂತ ಕವಿ, ತಜ್ಞ ನಿಘಂಟುಕಾರ, ಗಾಂಧೀವಾದಿ, ಬಹುಭಾಷಾ ಕೋವಿದ, ಹೊಸಗನ್ನಡ ಸಾಹಿತ್ಯದ ಗಣ್ಯಸಾಹಿತಿ ಎಲ್.ಗುಂಡಪ್ಪನವರು ೮೩ನೇ ವಯಸ್ಸಿನಲ್ಲಿ ೧೭.೧೧.೧೯೮೩ ರಲ್ಲಿ ಕನ್ನಡಿಗರ ಪಾಲಿಗೆ ಇಲ್ಲವಾದರು. ಕನ್ನಡ ಸಾಹಿತ್ಯದ ಉಜ್ವಲ ತಾರೆಯೊಂದು ಕಣ್ಮರೆಯಾಯಿತು.[೭]

---

[6] ಸಂಪ್ರತಿ, ಹಾ.ಮಾ.ನಾಯಕ್ ಪುಟ ೪೨೮

[7] ಪ್ರೊ.ಜಿ. ಅಶ್ವತ್ಥನಾರಾಯಣರವರ ಲೇಖನ ಪುಟ ೧೬

**ಆ. ಕೃತಿಗಳ ಪರಿಚಯ**

ಗುಂಡಪ್ಪನವರು ಬಹುಭಾಷಾ ವಿದ್ವಾಂಸರು ತಮ್ಮ ಕಾವ್ಯ ಪ್ರತಿಭೆ, ಸಮರ್ಥ ಭಾಷಾಂತರ ಕಾರ್ಯ, ವಿದ್ವತ್ತು, ಕೋಶ ಕೆಲಸ ನಿರ್ವಹಣೆ, ಸೃಜನಶೀಲ ಲೇಖನ, ಗಣ್ಯ ಅಧ್ಯಾಪಕ ವೃತ್ತಿಗಳಿಂದ ಕನ್ನಡ ಭಾಷೆ ಸಾಹಿತ್ಯಗಳಿಗೆ ಬಹುಮುಖ ಸೇವೆ ಸಲ್ಲಿಸಿದ್ದಾರೆ. ಮೂವತ್ತರ ದಶಕದ ತಮ್ಮ ವಿದ್ಯಾರ್ಥಿ ದೆಸೆಯಲ್ಲಿಯೇ ಮೊದಲುಗೊಂಡು ಎಪ್ಪತ್ತರ ದಶಕದವರೆಗೂ ಅವರ ಬರವಣಿಗೆಗಳು ಪ್ರಕಟಣೆಗಳು ಅವಿರತವಾಗಿ ಸಾಗಿದ್ದು ಸುಮಾರು ಐವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಸ್ವಂತವಾಗಿಯೂ, ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್, ಮೈಸೂರು ವಿಶ್ವವಿದ್ಯಾನಿಲಯಗಳ ಮೂಲಕವೂ ಪ್ರಕಟಿಸಿದರು. ಸರಳ ನಿರೂಪಣೆ, ಪಾಂಡಿತ್ಯ, ಶ್ರದ್ಧೆ, ಭಾಷಾಂತರದಲ್ಲಿ ತುಲನಾತ್ಮಕ ಅಭಿವ್ಯಕ್ತಿ, ಕಾವ್ಯ ಮನೋಧರ್ಮ ಹಾಗೂ ಸೃಜನಾತ್ಮಕ ಸಾಹಿತ್ಯದ ರಂಜಕತೆಗಳನ್ನು ಅವರ ಕೃತಿಗಳು ಬಿಂಬಿಸುತ್ತದೆ.

ಶ್ರೀ ಗುಂಡಪ್ಪನವರ ಸೇವಾಕ್ಷೇತ್ರ ವಿಸ್ತಾರವಾದದ್ದು, ವೈವಿಧ್ಯಮಯವಾದದ್ದು, ಇಂದಿಗೂ ಪ್ರಸ್ತುತದಲ್ಲಿದೆ. ಹಿಂದಿನ ಕೃತಿಗಳಿಗೆ ಅವರು ಬರೆದ ಮುನ್ನುಡಿಗಳು ಮತ್ತು ಅವನ್ನು ಕುರಿತ ಲೇಖನಗಳು ಹಿಂದಿನ ಸಾಹಿತ್ಯದ ಅಧ್ಯಯನಕ್ಕೆ ವಿದ್ವತ್ಪೂರ್ಣ ಕೊಡುಗೆಗಳು.

ಎಲ್. ಗುಂಡಪ್ಪನವರ ಮಾತೃಭಾಷೆ ಕನ್ನಡವಾಗಿದ್ದರೂ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮಾತೃಭಾಷಾ ಕನ್ನಡದವರು ಬೇರೊಂದು ದ್ರಾವಿಡ ಭಾಷೆಯನ್ನು ಅಧ್ಯಯನ ಮಾಡಬೇಕಾದ್ದರಿಂದ ತಮಿಳನ್ನು ತಮಿಳರಿಗಿಂತ ಚೆನ್ನಾಗಿ ಕಲಿತು ಇವರ ಮಾತೃಭಾಷೆ ತಮಿಳೇ ಎನ್ನಿಸುವಷ್ಟು ಕರಗತ ಮಾಡಿಕೊಂಡಿದ್ದರು. ಇಂತಹ ಪಾಂಡಿತ್ಯದಿಂದ ತಮಿಳು ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡತೊಡಗಿದರು. ಹೀಗೆ ಅನುವಾದ ಮಾಡಿರುವುದರಲ್ಲಿ ಇವರಿಗೆ ಅತಿ ಹೆಚ್ಚು ಹೆಸರನ್ನು ಗಳಿಸಿಕೊಟ್ಟ ಕೃತಿ 'ತಿರುಕ್ಕುರಳ್'. (೧೯೫೫) ಇದನ್ನು ಮೂಲ ಕುರಳ್ ಛಂದಸ್ಸಿನಲ್ಲಿ ಮತ್ತು ಹಳಗನ್ನಡದಲ್ಲಿ ಕನ್ನಡಕ್ಕೆ ಅನುವಾದಿಸಿದರು. ಈ ಮೂಲಕ ಕನ್ನಡ, ತಮಿಳು ಭಾಷೆಗಳನ್ನು ಬೆಸೆದರು. ಈ ಕೃತಿಯು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಇದರಲ್ಲಿ ಬಳಸಿದ ಪದಗಳು ಮೂಲ ದ್ರಾವಿಡ ಭಾಷೆಯಿಂದ ಕನ್ನಡಕ್ಕೆ ಬಂದು ಯಾವ ರೂಪ ತಾಳಿ ಇಂದಿಗೂ ಬದುಕಿವೆ ಎಂದು ಹುಡುಕಿ, ಅವುಗಳನ್ನು ಹೆಣೆದು ಸಿದ್ಧಪಡಿಸಿದ್ದಾರೆ. ಇದೊಂದು ಭಾಷಿಕ ಪಠಾಂತರ ಸಾಧನೆ. ಗುಂಡಪ್ಪನವರಂತೆ ತಮಿಳು, ಕನ್ನಡ ಎರಡರಲ್ಲೂ ಅಪಾರ ಕೃಷಿ ಮಾಡಿದವರಿಗೆ ಮಾತ್ರ ಇದು ಸಾಧ್ಯ.

೧. ಅನುವಾದಕರಾಗಿ

ಅ. ತಮಿಳು

ಹೀಗೆ ಸುಮಾರು ತಮ್ಮ ಅನುವಾದದಿಂದ ೧೩ ತಮಿಳು ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಅವುಗಳಲ್ಲಿ ಶ್ರೇಷ್ಠ ಕೃತಿಗಳಾದ 'ತಿರುವಾಚಕಂ', 'ಪೆರಿಯಪುರಾಣ', 'ನಾಲ್ಮಣಿ ಕಡುಕು' (ನೀತಿ ಶತಕ – ೧೯೩೬), 'ಉದಯನ ಚರಿತ್ರೆ ಸಂಗ್ರಹ', (ಪೆರುಂಗತೈ – ೧೯೪೮) ಮುಂತಾದ ಕೃತಿಗಳನ್ನು ಕನ್ನಡಕ್ಕೆ ಪರಿಚಯಿಸುವುದರ ಮೂಲಕ ಶ್ರೇಷ್ಠ ಅನುವಾದಕರು ಎಂದೆನಿಸಿಕೊಂಡಿದ್ದಾರೆ.

ಮಹಾಮಹೋಪಾಧ್ಯಾಯ ಸ್ವಾಮಿನಾಥ ಅಯ್ಯರ್ ರವರ 'ನನ್ನ ಚರಿತ್ರೆ' (ಎನ್ ಚರಿತ್ತಿರಮ್), 'ನಾಲ್ಮಣಿ ಕಡಿಗೈ' ಎಂಬ ವಿಳಂಬನಾಗನಾರನ ೧೦೪ ನೀತಿ ಪದ್ಯಗಳು ಮೊದಲಾದವು. ಜೊತೆಗೆ ಹರಿಹರನ ರಗಳೆ ಮತ್ತು ಪೆರಿಯಪುರಾಣವನ್ನು ಹೋಲಿಸಿ ವಿದ್ವತ್ಪೂರ್ಣ ವಿಮರ್ಶೆ ಬರೆದರು. ರಾಜಗೋಪಾಲಚಾರ್ಯರ ಭಾರತದ ಕಥೆಯನ್ನು 'ವ್ಯಾಸರ ಔತಣ' ವೆಂದು ಸರಳಗನ್ನಡದಲ್ಲಿ ಅನುವಾದಿಸಿದರು. ಸರ್ವಜ್ಞ, ತಿರುವಳ್ಳುವರ್ ಅನ್ನು ಹೋಲಿಸಿ ಕನ್ನಡ – ತಮಿಳಿಗೆ ಸರಿಸಾಟಿ ಎಂದು ಸಾಬೀತು ಪಡಿಸಿದ್ದಾರೆ.

ಇಂತಹ ತಮಿಳು ಸೇವೆಯನ್ನು ಸಾಹಿತ್ಯದ ಮುಖಾಂತರ ಮಾಡಿದ ಎಲ್. ಗುಂಡಪ್ಪನವರಿಗೆ ಮದ್ರಾಸಿನ ತಮಿಳು ಬರಹಗಾರರ ಸಂಘದವರು 'ನಾಗರಕೊಯಿಲ್'ನಲ್ಲಿ ೧೯೫೪ರಲ್ಲಿ ಚಿನ್ನದ ಪದಕವನ್ನು ನೀಡಿ ಗೌರವಿಸಿದ್ದಾರೆ. ಈ ಸಂದರ್ಭದಲ್ಲಿ ಗುಂಡಪ್ಪನವರು ಹೇಳಿದ ಮಾತುಗಳು ಅವರ ಕನ್ನಡಾಭಿಮಾನಕ್ಕೆ ಸಾಕ್ಷಿಯಾಗಿವೆ. ಅವರು ಹೇಳಿರುವ ಮಾತುಗಳು ಇಂತಿವೆ.

"ತಮಿಳಿಗೆ ಸಲ್ಲಿಸಿರುವ ಸೇವೆಗಾಗಿ ಎಂದು ನನಗೆ ಈ ಮರ್ಯಾದೆ ಮಾಡಿದ್ದೀರಿ ನನ್ನ ಸ್ವಂತ ಮೇಲ್ಮೆಗಾಗಿ ತಮಿಳು ಕಲಿಯಲು ಪ್ರಯತ್ನಿಸಿದೆ ತಿಳಿದಷ್ಟನ್ನು ನಾಲ್ವರಲ್ಲಿ ಹಂಚಿ ಅವರೊಡನೆ ಆನಂದಿಸಬಯಸಿದೆ. ಇದನ್ನು ಸ್ವಸೇವೆ ಎಂದೇ ಹೇಳಬೇಕಾಗುತ್ತದೆ. ವಿಶಾಲಾರ್ಥಕೊಟ್ಟು 'ನುಡಿಸೇವೆ' ಎನ್ನುವುದಾದರೆ ಆ ಸೇವೆ ನನ್ನ ತಾಯ್ನಾಡಿಗೆ – ಕನ್ನಡಕ್ಕೆ ಎಂದು ಬೇಕಾದರೆ ಹೇಳಬಹುದು. ತಮಿಳಿಗೆ ಸೇವೆ ಸಲ್ಲಿಸುತ್ತಿದ್ದೇನೆಂಬ ಭಾವನೆ ನನಗಿಲ್ಲ. ತಾವು ಯಾವ ಸಭೆಗೆ ಹೋದರು ಕನ್ನಡ – ತಮಿಳು ಸಮಾನ ಭಾಷೆಗಳೆಂದು ತಮಿಳರಿಗೆ ದಿಟ್ಟವಾಗಿ ಘೋಷಿಸಿದರು. ಸಾಹಿತ್ಯದ ಆಧಾರದ ಮೇಲೆ ಪ್ರತಿಪಾದಿಸಿದರು ಕನ್ನಡಕ್ಕಿಂತ ತಮಿಳು ಪ್ರಾಚೀನ ಶ್ರೇಷ್ಠ ಎಂದು ವಾದಿಸುತ್ತಿದ್ದವರಿಗೆ ದಿಟ್ಟ ಉತ್ತರ ಕೊಟ್ಟ ಗಟ್ಟಿ ಸಾಹಿತಿಗಳಲ್ಲಿ ಎಲ್. ಗುಂಡಪ್ಪನವರು ಅಗ್ರಗಣ್ಯರಾಗಿದ್ದಾರೆ.

ಹೀಗೆ ತಮಿಳಿನ ಉತ್ತಮ ಸಾಹಿತ್ಯವನ್ನು ಕನ್ನಡದವರು ಕೂಡ ಓದಲಿ ಈ ಮೂಲಕ ದಾರಿದೀಪವಾಗಿದ್ದಾರೆ. ತಮಿಳು – ಕನ್ನಡದ ಬಾಂಧವ್ಯವೃದ್ಧಿಯಲ್ಲಿ ಗಣನೀಯ ಸೇವೆಯನ್ನು ಸಲ್ಲಿಸಿದ್ದಾರೆ. ಅಂತೆಯೇ ಎರಡೂ ಭಾಷೆಗಳ ಜಾಯಮಾನವನ್ನು ಬಲ್ಲ ಭಾಷಾಂತರಕಾರರು ಕನ್ನಡ ಸಾಹಿತ್ಯದಲ್ಲಿ ವಿರಳವೆಂದೇ ಹೇಳಬೇಕು. ಈ ನಿಟ್ಟಿನಲ್ಲಿ ಎಲ್. ಗುಂಡಪ್ಪನವರ ಕೀರ್ತಿ ಅಪಾರ.

ಆ. ಸಂಸ್ಕೃತ

ಬಾಲ್ಯದಿಂದಲೇ ಸಂಸ್ಕೃತದ ಜ್ಞಾನ ಇದ್ದುದ್ದರಿಂದ ಸಂಸ್ಕೃತದ ಕೆಲವು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇವುಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿರುವುದು 'ಭಾಸನ ಏಕಾಂತ ನಾಟಕಗಳು (೧೯೩೩) ಅನುವಾದ ತಿರುವಾಂಕೂರಿನ ಟಿ. ಗಣಪತಿಶಾಸ್ತ್ರಿಗಳ ಮೂಲಕ ನೂತನವಾಗಿ ಭಾರತೀಯ ಸಾಹಿತ್ಯಕ್ಕೆ ಪರಿಚಯವಾಗಿ ಚರ್ಚೆಯಲ್ಲಿದ್ದ ಭಾಸಮಹಾಕವಿಯ ೧೩ ನಾಟಕಗಳನ್ನು ಎಲ್. ಗುಂಡಪ್ಪನವರು ಪರಿಚಯಿಸಿದ್ದಾರೆ. 'ಪ್ರತಿಜ್ಞಾ ಯೌಗಂಧರಾಯಣ' (೧೯೩೭). 'ಚಾರುದತ್ತ' (೧೯೩೬), 'ಪಂಚರಾತ್ರ' (೧೯೪೭). 'ಸ್ವಪ್ನವಾಸವದತ್ತ' (೧೯೪೭) ಎಂಬ ಬಿಡಿಬಿಡಿಯಾದ ಪ್ರತ್ಯೇಕ ಕೃತಿಗಳನ್ನೆಲ್ಲ "ಶ್ರೀ ಚಾಮುಂಡಿಕಾ ನಿಘಂಟು" (೧೯೫೫) ಎಂಬ ಮುಮ್ಮಡಿ ಕೃಷ್ಣರಾಜ ಒಡೆಯರ್ ಸಂಸ್ಕೃತ ನಿಘಂಟಿನ ಅನುವಾದವನ್ನು ಕೊಟ್ಟಿದ್ದಾರೆ. ಇದರಿಂದ ಸಂಸ್ಕೃತ ತಿಳಿಯದ ಕನ್ನಡಿಗರು ಭಾಸನ ಕಾವ್ಯ ಶಕ್ತಿ ಮತ್ತು ನಾಟಕ ರಚನಾ ನೈಪುಣ್ಯವನ್ನು ಅರಿಯಲು ಉತ್ತಮ ಸಾಧನವಾಯಿತು.

ಇ. ಇಂಗ್ಲಿಷ್

ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟುತ್ತಿದ್ದ ಕಾಲದಲ್ಲಿ ಅದಕ್ಕೆ ಪೂರಕವಾದ ಇಂಗ್ಲಿಷ್ ಸಾಹಿತ್ಯದ ಪರಿಚಯವನ್ನು ಸಮರ್ಥವಾಗಿ ಮಾಡಿದವರು ಗುಂಡಪ್ಪನವರು. ಈ ನಿಟ್ಟಿನಲ್ಲಿ ಇಂಗ್ಲಿಷಿನಿಂದ ಕನ್ನಡಿಸಿದ 'ಟಾಲ್‌ಸ್ಟಾಯ್ ಕಥೆಗಳ'ನ್ನು ಮೊಟ್ಟಮೊದಲಬಾರಿಗೆ ಸೊಗಸಾಗಿ ಕನ್ನಡಕ್ಕೆ ತಂದಿದ್ದಾರೆ. ಇಂದಿಗೂ ಈ ಕಥೆಗಳನ್ನು ಕನ್ನಡದಲ್ಲಿ ಓದಿದವರು ಮತ್ತೆ ಮತ್ತೆ ಮೆಲುಕು ಹಾಕುತ್ತಾರೆ. ಇದು ಗುಂಡಪ್ಪನವರ ಇಂಗ್ಲಿಷ್ ಭಾಷಾ ಪ್ರೌಢಿಮೆಗೆ ಮತ್ತು ಪ್ರತಿಭೆಗೆ ದ್ಯೋತಕವಾಗಿದ್ದು ಈ ವರೆಗೆ ಮೂರು ಮುದ್ರಣಗಳನ್ನು ಪಡೆದಿದೆ.

ನಾರಾಯಣದತ್ತರವರು ಟಾಲ್‌ಸ್ಟಾಯ್ ಕಥೆಗಳನ್ನು ಮೆಚ್ಚಿ ಈ ರೀತಿ ಹೇಳಿದ್ದಾರೆ. "ಟಾಲ್‌ಸ್ಟಾಯ್ ನ ಮುಖ್ಯ ಕೃತಿಗಳನ್ನು ಇಂಗ್ಲಿಷಿನಲ್ಲಿ ಮತ್ತು ನೇರವಾಗಿ ರಷ್ಯನ್ ಭಾಷೆಯಿಂದ ಹಿಂದಿಗೆ ಮಾಡಲ್ಪಟ್ಟ ಅನುವಾದಗಳಲ್ಲಿ ಓದಿದ್ದೇನೆ. ಆದರೆ ನಮ್ಮ ಮಹರ್ಷಿ ವೇದವ್ಯಾಸನಿಗೆ ಹೋಲುವ ಈ ರಷ್ಯನ್ ಮಹಾ ಸಾಹಿತಿಯ ಕಲೆಯ ರುಚಿಯನ್ನು ನನಗೆ ಮೊದಲ ಬಾರಿ ತೋರಿಸಿಕೊಟ್ಟವರು ಗುಂಡಪ್ಪನವರು. ಈ ಉಪಕಾರವನ್ನು

ಮರೆಯಲಾದೀತೆ?" ಎಂದಿದ್ದಾರೆ. ಹೀಗೆ ಗುಂಡಪ್ಪನವರು 'ಟಾಲ್‌ಸ್ಟಾಯ್ ಕಥೆಗಳು' ಎಂಬ ಶೀರ್ಷಿಕೆಯಲ್ಲಿ ೨೦ ಕಥೆಗಳನ್ನು ಕನ್ನಡದಲ್ಲಿ ಕನ್ನಡಿಸಿದರು.[8]

ಇದರ ಜೊತೆಗೆ ಮ್ಯಾಥ್ಯೂ ಆರ್ನಾಲ್ಡ್‌ನ 'ಸೊಹ್ರಾಬ್ ಮತ್ತು ರುಸ್ತುಮ್' (೧೮೪೭) ಪದ್ಯದ ಅನುವಾದಕ್ಕೆ ೧೯೩೦ರಲ್ಲೇ ಬಿ.ಎಂ.ಶ್ರೀ ಚಿನ್ನದ ಪದಕ ಲಭಿಸಿದೆ.

ಥಾಮಸ್ ಆಲ್ವಾ ಎಡಿಸನ್, ಫ್ಲಾರೆನ್ಸ್ ನೈಟಿಂಗೇಲ್ ಲೂಯಿಸ್ಟೀವ್ಸ್‌ರ ಜೆಕಿಲ್, ಹೈಡ್ ಕೃತಿಯನ್ನು ನರ – ರಾಕ್ಷಸ ಎಂದು ಕನ್ನಡಕ್ಕೆ ಅನುವಾದಿಸಿದ್ದಾರೆ. ಕುಟುಂಬ ಸೌಖ್ಯ (೧೯೫೧ – ಫ್ಯಾಮಿಲಿ ಹ್ಯಾಪಿನೆಸ್) 'ಕ್ರೈಟ್ಸರ್ ಸೊನಾಟ', 'ನರಕದ ನಾಶ' ಮತ್ತು ಪುನರುದ್ಧಾರ' ಎಂಬ ಕೆಲವು ಟಾಲ್ಸ್‌ಟಾಯ್‌ರ ಕಥೆಗಳ ಅನುವಾದ ಇನ್ನು ಹಸ್ತಪ್ರತಿಯ ರೂಪದಲ್ಲಿದೆ.

**೨. ವಯಸ್ಕರ ಶಿಕ್ಷಣಕ್ಕಾಗಿ**

ವಯಸ್ಕರ ಶಿಕ್ಷಣ ಸಮಿತಿಯ ಅಕ್ಷರ – ಕಲಿತ ಹಿರಿಯರಿಗಾಗಿ ಸುಲಭ ಭಾಷೆಯಲ್ಲಿ ಟಾಲ್‌ಸ್ಟಾಯ್ ಕಥೆಗಳನ್ನು ನೀಡಿರುವುದು ಮತ್ತು ಮಕ್ಕಳ ಸಾಹಿತ್ಯವನ್ನು ಅನುವಾದಿಸಿರುವುದು ವಿಶೇಷವಾಗಿದೆ.

**೩. ಸಂಪಾದಕರಾಗಿ**

ಇವರ ವಿದ್ವತ್ತು ಸಂಪೂರ್ಣವಾಗಿ ಅಡಕಗೊಂಡಿರುವುದು ಸಂಪಾದಿತ ಕೃತಿಗಳಲ್ಲಿ ತಮ್ಮ ಪಾಂಡಿತ್ಯ ವಿದ್ವತ್ತನ್ನು ಕೇವಲ ಅನುವಾದಕ್ಕೆ ಸೀಮಿತಗೊಳಿಸದೆ 'ಆದಿಪುರಾಣ ಸಂಗ್ರಹ'ವನ್ನು ೧೯೫೪ರಲ್ಲಿ ಸಂಗ್ರಹ ಮಾಡುವ ಮೂಲಕವೂ ಶ್ರೇಷ್ಠ ಮಟ್ಟದ ಘನ ವಿದ್ವಾಂಸರಾಗಿ ಗುರುತಿಸಿಕೊಂಡಿದ್ದಾರೆ. ಇವರ ಇನ್ನಿತರ ಕೃತಿಗಳು 'ಶ್ರೀ ಭಗವಚ್ಚರಿತ್ರೆ', 'ತೊರವೆರಾಮಾಯಣ' ಸಂಗ್ರಹ ಇನ್ನು ಮುಂತಾದವು.

ಜೈನ ಕೃತಿಯೊಂದನ್ನು ಸಂಪಾದಿಸುವಾಗ ಎದುರಾಗುವ ಜೈನ ಧರ್ಮದ ತಿರುಳು, ಪಾರಿಭಾಷಿಕ ಪದಗಳು ತಿಳುವಳಿಕೆಗಳನ್ನು ಸಮರ್ಪಕವಾಗಿ ಗ್ರಹಿಸಿ ಸಮರ್ಥವಾಗಿ ಪರಿಚಯಿಸುವಲ್ಲಿ ಗುಂಡಪ್ಪನವರ ಕಾರ್ಯ ಹಳಗನ್ನಡ ಕಾವ್ಯ ಸಂಗ್ರಹಗಳ ಮಾಲೆಯಲ್ಲಿ ವಿಶಿಷ್ಟ ಸ್ಥಾನಗಳಿಸಿದೆ.

---

[8] ಪಂಡಿತ ಎಲ್. ಗುಂಡಪ್ಪ ಒಂದು ಸ್ಮರಣೆ. ನಾರಾಯಣದತ್ತ. (ಪತ್ರಿಕಾಲೇಖನ)

**೪. ಮಕ್ಕಳಿಗಾಗಿ:**

ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿಯೂ ಗುಂಡಪ್ಪನವರ ಹೆಸರು ದಾಖಲಾಗುವಂತಹ ಹಲವು ಕೃತಿಗಳಿವೆ. ಶಾಲಾ ಮಕ್ಕಳಿಗಾಗಿ ಕನ್ನಡ ವ್ಯಾಕರಣ ಪಟ್ಟಿಯನ್ನು ರಚಿಸಿದ್ದಾರೆ. ಇವರು ಕೇವಲ ಬರೆಯುವುದರಲ್ಲಿ ಮಕ್ಕಳ ಸಾಹಿತಿ ಅಷ್ಟೇ ಆಗಿರಲಿಲ್ಲ. ನಿಜ ಜೀವನದಲ್ಲಿ ಮಕ್ಕಳಂತೆ ಮುಗ್ಧರಾಗಿದ್ದರು. ಕನ್ನಡದಲ್ಲಿ 'ಚಟಾಕಿ' ಎಂಬ ಮಕ್ಕಳ ಸಂಕಲನ ಹೆಚ್ಚು ಜನಪ್ರಿಯವಾಗಿದೆ ಮತ್ತು ಕನ್ನಡ ಸಾಹಿತ್ಯ ಚಿತ್ರಗಳು ಎಂದು ಕನ್ನಡ ಸಾಹಿತ್ಯದ ಸಮಗ್ರ ವ್ಯಕ್ತಿ ಚಿತ್ರಗಳ ಸಂಕಲನವನ್ನು ಮೂರು ಭಾಗಗಳಲ್ಲಿ ನೀಡಿದ್ದಾರೆ. ಭಾರತ, ರಾಮಾಯಣ, ಜೈನ ಸಾಹಿತ್ಯ ಕೃತಿಗಳ ಕಥಾನಾಯಕರನ್ನು ಸರಳ ಸುಂದರವಾಗಿ ಚಿತ್ರಿಸಿದ್ದಾರೆ. ಕನ್ನಡ ವ್ಯಾಕರಣ ಪಾಠಗಳು, ಜ್ಯೋತಿರ್ಲಿಂಗ ಸ್ವಾಮಿಗಳ ಜೀವನ ಚರಿತ್ರೆ ಇವು ಕನ್ನಡದಲ್ಲಿ ರಚಿಸಿದ ಸ್ವತಂತ್ರ್ಯ ಕೃತಿಗಳಾಗಿವೆ.

ಇವುಗಳೇ ಅಲ್ಲದೆ 'ಪಂಪ ಪರಿಚಯ' (ಪದ್ಯ ಸಂಕಲನ – ೧೯೩೧). 'ಪಂಪನ ಹಿತವಚನಗಳು' (ಪಂಪಕವಿ ಮತ್ತು ಕಾವ್ಯ ಪರಿಚಯ ಹಾಗೂ ಸೂಕ್ತಿಗಳ ಸಂಗ್ರಹ) ಮುಂತಾದ ಕೃತಿಗಳನ್ನು ಮಕ್ಕಳು, ನವಸಾಕ್ಷರರು ಹಾಗೂ ಸಾಮಾನ್ಯ ಓದುಗರಿಗಾಗಿ ರಚಿಸಿದ್ದಾರೆ. ಇವುಗಳಲ್ಲಿನ ಸರಳ ಗದ್ಯ ಸುಲಭವಾದ ಮತ್ತು ಆಕರ್ಷಣೀಯವಾದ ಶೈಲಿ. ಸುಂದರ ನಿರೂಪಣೆ ಗಮನ ಸೆಳೆಯುವಂತಿದೆ.

**೭. ಜಾನಪದ ಸಾಹಿತ್ಯ ಸಂಪಾದಕರಾಗಿ:**

ಕ್ಷೇತ್ರಕಾರ್ಯದ ಬಗೆಗೆ ಜನ ಕೇಳರದಿದ್ದ ಕಾಲದಲ್ಲಿ ಶ್ರೀಯುತರು ತಮ್ಮ ಸೋದರ ಮತಿಘಟ್ಟ ಕೃಷ್ಣಮೂರ್ತಿಯವರೊಡನೆ ಸೇರಿ ಊರುಗಳಲ್ಲಿ. ಹಳ್ಳಿ ಹಳ್ಳಿಗಳಲ್ಲಿ. ಸುತ್ತಾಡಿ ಸಂಪ್ರದಾಯದಿಂದ ಬೆಳೆದು ಬಂದಿದ್ದ ಜಾನಪದ ಕವಿತೆಗಳನ್ನು, ಗೀತೆ. ಲಾವಣಿಗಳನ್ನು ಆಯ್ದು ಪರಿಚಯ, ಟಿಪ್ಪಣಿಗಳೊಡನೆ ಸಂಪಾದಿಸಿ 'ನಾಡಪದಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದು ಗುಂಡಪ್ಪನವರು ಮಾಡದ ಮಹತ್ವದ ಒಂದು ಕೆಲಸ ಇದನ್ನು ಕುರಿತು ಬರೆಯುವಾಗ ಬಿ.ಎಂ.ಶ್ರೀಯವರು ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. 'ಚಿಕ್ಕಂದಿನಿಂದ ಮೊದಲಿಗೊಂಡು ಜೀವಾವಧಿ ನನ್ನಲ್ಲಿ ನೆಲಸಿದ ಅಷ್ಟೊಂದು ಕನಸುಗಳನ್ನು ನನ್ನ ವಿದ್ಯಾರ್ಥಿಗಳು ಗ್ರಹಿಸಿ ಒಂದಲ್ಲ ಒಂದು ಬಗೆಯಲ್ಲಿ ನನಸಾಗಿಸಿ ಸಾಧಿಸುತ್ತಿರುವರೆಂಬುದು ನನಗೆ ಬಹಳ ಹೆಮ್ಮೆಯ ವಿಷಯ' ಎಂದಿದ್ದಾರೆ.[೯]

---

[9] ಶಬ್ದಗಾರುಡಿಗ ಗುಂಡಪ್ಪ–ಅ.ರಾ.ಮಿತ್ರ, ಪುಟ ೯ (ಪತ್ರಿಕಾ ಲೇಖನ)

ಇದೆಲ್ಲದರ ಜೊತೆಗೆ ಕುಮಾರವ್ಯಾಸ ಭಾರತವನ್ನು, ಆಧುನಿಕ ಗದ್ಯಕೃತಿ, ತಮಿಳು ಕವಿತೆಗಳನ್ನು ಕಾವ್ಯಗಳನ್ನು ಗದ್ಯಾನುವಾದ ಮಾಡಿದ್ದು ಗುಂಡಪ್ಪನವರ ಮತ್ತೊಂದು ದೊಡ್ಡ ಕೆಲಸವಾಗಿದೆ.

ಇವರಿಗೆ ಸಂದ ಗೌರವಗಳು ಹಾಗೂ ಪ್ರಶಸ್ತಿಗಳು

ಎಲ್. ಗುಂಡಪ್ಪನವರ ಸಾಹಿತ್ಯ ಕೃತಿಗಳು ಹಲವಾರು ಪ್ರಶಸ್ತಿ ಬಹುಮಾನಗಳನ್ನು ಪಡೆದು ಪಠ್ಯಪುಸ್ತಕಗಳಾಗಿದೆ.

೧) ಬಿ.ಎಂ. ಶ್ರೀ ಅವರ ಬೆಳ್ಳಿ ಹಬ್ಬದ ಸ್ವರ್ಣ ಪದಕ (೧೯೩೦).

೨) ದೇವರಾಜ ಬಹದ್ದೂರು ಬಹುಮಾನ (೧೯೩೯).

೩) ತಮಿಳುನಾಡಿನ ಬರಹಗಾರರ ಸಂಘದಿಂದ ಸನ್ಮಾನ (೧೯೫೯).

೪) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (೧೯೭೫).

೫) ಗಾಂಧಿ ಶತಮಾನೋತ್ಸವ ಗೌರವ

೬) ಹಾಸನ ಜಿಲ್ಲೆಯ ಸಾಹಿತ್ಯ ಸಮ್ಮೇಳನ ಗೌರವ ಮುಂತಾದ ಹಲವು ಮನ್ನಣೆಗಳು ಇವರಿಗೆ ಸಂದಿವೆ.

ನವೋದಯ ಸಾಹಿತ್ಯದ ಘಟ್ಟದಲ್ಲಿ ಬಂದ ಎಲ್. ಗುಂಡಪ್ಪನವರು ತಮ್ಮ ಸೃಜನಶೀಲ ಮನೋಭಾವದಿಂದ, ಶಬ್ದ ಜ್ಞಾನದಿಂದ ವಿದ್ವತ್ ದೃಷ್ಟಿಯಿಂದ ತಮ್ಮ ಅನುವಾದಗಳ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಕನ್ನಡಿಗರ ಮನದಲ್ಲಿ ಕನ್ನಡ ಕೃತಿಗಳ ಮುಖಾಂತರ ಶಾಶ್ವತ ಸ್ಥಾನವನ್ನು ಪಡೆದಿದ್ದಾರೆ ತಮ್ಮ ಪ್ರತಿಭೆಯ ಛಾಪನ್ನು ಮೂಡಿಸಿ ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನದಲ್ಲಿ ಗುಂಡಪ್ಪನವರ ಅನುವಾದ ಸಾಹಿತ್ಯ ಹಾಗೂ ಸಂಪಾದಿತ ಕೃತಿಗಳು ಪ್ರಮುಖ ಸ್ಥಾನವನ್ನು ಪಡೆದಿವೆ.

ಇದರ ಸಂಪಾದಿತ ಕೃತಿಗಳಲ್ಲಿ ಇವರಿಗೆ ಹೆಸರು ತಂದಿದ್ದು ಎರಡು ಕೃತಿಗಳು. ಒಂದು ಆದಿ ಪುರಾಣ ಸಂಗ್ರಹ ಇನ್ನೊಂದು ನಾಡಪದಗಳು. ಆದಿಪುರಾಣ ಸಂಗ್ರಹ ಕನ್ನಡ ಕಾವ್ಯ ಸಂಗ್ರಹಗಳಲ್ಲಿ ಮೇರುಕೃತಿ ಎನಿಸಿದೆ.

# ಅಧ್ಯಾಯ – ೩

## ಕನ್ನಡ ಗ್ರಂಥಸಂಪಾದನೆಯ ಸಂಕ್ಷಿಪ್ತ ಇತಿಹಾಸ

ಕನ್ನಡ ಗ್ರಂಥ ಸಂಪಾದನೆಗೆ ಬಹುದೊಡ್ಡ ಇತಿಹಾಸವಿದೆ. ನಮ್ಮ ಪ್ರಾಚೀನ ಕವಿಗಳ ಹಸ್ತಪ್ರತಿಗಳು ಅರಮನೆ, ಗುರುಮನೆಗಳ ಪುಸ್ತಕ ಭಂಡಾರ ಮತ್ತು ಖಾಸಗೀ ಮಹನೀಯರ ಮನೆಗಳಲ್ಲಿ ಹೇರಳವಾಗಿ ಸಂಗ್ರಹವಾಗಿತ್ತು. ಇದನ್ನು ಕಾವ್ಯಾಸಕ್ತರು ಲಿಪಿಕಾರರಿಂದ ಪ್ರತಿಮಾಡಿಸಿ ಓದುತ್ತಿದ್ದರು. ಸಾಮಾನ್ಯ ಜನರಿಗೆ ಇದರ ತಿರುಳನ್ನು ಅರ್ಥೈಸಿಕೊಳ್ಳುವುದು ಅಸಾಧ್ಯವಾಗಿತ್ತು ಮತ್ತು ಇದರ ಉಪಯೋಗ, ವಿಚಾರದ ಬಗ್ಗೆ ತಿಳಿಯದೇ ಇರುವವರು ಇವುಗಳನ್ನು ಹಾಳು ಮಾಡುತ್ತಿದ್ದರು. ಇಲ್ಲವೇ ಧೂಳು ಮತ್ತು ಕೀಟಗಳಿಂದ ನಾಶವಾಗುತ್ತಿದ್ದವು.

ಕನ್ನಡದಲ್ಲಿ ೧೯ನೇಯ ಶತಮಾನದ ಮಧ್ಯಭಾಗದವರೆಗೂ ಪ್ರಾಚೀನ ಕಾಲದ ಯಾವುದೇ ಮೂಲಹಸ್ತಪ್ರತಿ ದೊರೆತಿಲ್ಲ. ಆದರೆ ಲಿಪಿಕಾರರು ಮೂಲ ಹಸ್ತಪ್ರತಿಯಿಂದ ಮರುಪ್ರತಿಯನ್ನಾಗಿ ಮಾಡಿರುವುದಕ್ಕೆ ನಿದರ್ಶನ ಅತ್ತಿಮಬ್ಬೆಯು ಪೊನ್ನನ ಶಾಂತಿಪುರಾಣವನ್ನು ಸಹಸ್ರ ಪ್ರತಿಗಳನ್ನು ಮಾಡಿಸಿದಳು ಎಂಬ ಹೇಳಿಕೆಯಿದೆ. ಆದರೂ ಕಾಲ ಗರ್ಭದಲ್ಲಿ ಅಡಗಿಹೋದ ಕೃತಿಗಳು ನೂರಾರು. ಅವುಗಳಲ್ಲಿ ಶ್ರೀವಿಜಯನ 'ರಘುವಂಶ ಮಹಾಪುರಾಣ', ಗುಣವರ್ಮನ 'ಹರಿವಂಶ ಶೂದ್ರಕಗಳು', ಪೊನ್ನನ 'ಭುವನೈಕ್ಯ ರಾಮಾಭ್ಯುದಯ', ರನ್ನನ 'ಚಕ್ರೇಶ್ವರ ಚರಿತೆ', 'ಪರಶುರಾಮ ಚರಿತೆ' ಮೊದಲಾದವು ಕಣ್ಮರೆಯಾಗಿರುವುದು ನಮ್ಮೆಲ್ಲರ ದೌರ್ಭಾಗ್ಯ.[೧೦]

ಮೈಸೂರಿನ ಸರ್ಕಾರ ಪ್ರಾಚ್ಯವಿದ್ಯಾ ಸಂಶೋಧನಾ ಇಲಾಖೆಯನ್ನು ಸ್ಥಾಪಿಸುವವರೆಗೆ ಎಂದರೆ ೧೮೮೮ ರವರೆಗೆ ಈ ಹಸ್ತ ಪ್ರತಿಗಳನ್ನು ಒಂದೆಡೆ ಕಲೆಹಾಕುವ ಅಭ್ಯಾಸ ಬಂದಿರಲಿಲ್ಲ.

ಈ ಇಲಾಖೆಯ ಮುಖ್ಯಸ್ಥ ಬೆಂಜಮಿನ್ ಲೂಯಿರೈಸ್ ಇದನ್ನು ಮನಗಂಡು ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ ಕಾರ್ಯದಲ್ಲಿ ತೊಡಗಿದರು. ರಾ. ನರಸಿಂಹಚಾರ್ ಇದರಲ್ಲಿ ಭಾಗವಹಿಸಿ ಮುಂದುವರೆಸಿದರು.

ಹೀಗೆ ಪ್ರಾಚೀನ ಕನ್ನಡ ಗ್ರಂಥ ಸಂಪಾದನೆಯನ್ನು ಎರಡು ವಿಧಗಳನ್ನಾಗಿ ನೋಡಬಹುದು.

---

[10] ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ, ಬಿ.ಎಸ್. ಸಣ್ಣಯ್ಯ ಪುಟ ೧

## ೧) ಕ್ರೈಸ್ತ ಮಿಶನರಿಗಳು

ಕ್ರೈಸ್ತ ಮತ ಪ್ರಚಾರಕ್ಕೆಂದು ಬಂದ ಮಿಶನರಿಗಳು ನಮ್ಮ ನಾಡಿನ ಅಪೂರ್ವ ವಸ್ತುಗಳಾದ ನಾಣ್ಯ, ಶಿಲ್ಪ, ಓಲೆಗರಿ, ಕಾಗದದ ಗ್ರಂಥಗಳು, ಶಾಸನಗಳು ಇವುಗಳು ಅಮೂಲ್ಯವಾದದ್ದೆಂದು ಗುರುತಿಸಿ ಇಲ್ಲಿನ ಜನರೊಂದಿಗೆ ಮಿಳಿತವಾಗಲು ನಾಡಿ ಭಾಷೆಯನ್ನು ಕಲಿತು ೧೯ನೇಯ ಶತಮಾನದಲ್ಲಿ ಗ್ರಂಥ ಸಂಪಾದನಾ ಕಾರ್ಯ ಆರಂಭಿಸಿದರು.

ಕ್ರೈಸ್ತ ಮತ ಪ್ರಚಾರಕರಿಂದ ಮುದ್ರಣ ಕಲೆ ಬೆಳಕಿಗೆ ಬಂತು. ಇವರಲ್ಲಿ ಡಾ. ವಿಲಿಯಂ ಕ್ಯೇರಿ ಎಂಬಾತನು ರಚಿಸಿದ (Grammer of the Kurnata Language) ಎಂಬುದು ೧೮೧೭ರಲ್ಲಿ ಶ್ರೀರಾಮಪುರದಲ್ಲಿ ಮುದ್ರಿತವಾಯಿತು. ಕನ್ನಡದ ಅಚ್ಚು ಮೊಳೆಗಳನ್ನೊಳಗೊಂಡ ಪ್ರಥಮ ಮುದ್ರಿತ ಗ್ರಂಥವು ಇದಾಗಿದೆ.[11]

ನಂತರ ೧೮೨೦ರಲ್ಲಿ ಜಾನ್‌ಮೆಕೆರಲ್‌ನ ಕನ್ನಡ ವ್ಯಾಕರಣ, ರೆ.ರೀವ್ಸ್‌ನ ಕನ್ನಡಕೋಶ, ನ್ಯೂಟೆಸ್ಟ್‌ಮೆಂಟ್ ಎಂಬ ಹೆಸರಿನ ಪ್ರಥಮ ಭಾಗವು ಮುದ್ರಿತವಾಗಿ ಪ್ರಕಟವಾದವು. ಈ ಕಾಲದಲ್ಲಿ ಮುದ್ರಣಕಲೆ ಕನ್ನಡದಲ್ಲಿ ಬೇರುಬಿಟ್ಟು ನೆಲಸಿತು.

ಕರ್ನಾಟಕದ ಎಲ್ಲಾ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಲು ಮುದ್ರಣ ಸೌಲಭ್ಯ ಸಹಕಾರಿಯಾದದ್ದರಿಂದ ಕನ್ನಡ ಗ್ರಂಥ ಸಂಪಾದನೆಯ ಇತಿಹಾಸವು ಆರಂಭವಾಯಿತು.

ಈ ಹೊತ್ತಿಗೆ ಬೈಬಲ್‌ನ ಪರಿಷ್ಕರಣವು ನಡೆದಿದ್ದು ಸುಖ್ಥಣ್‌ಕರ್ ಅವರ ಸಂಸ್ಕೃತ ಮಹಾಭಾರತದ ಪರಿಷ್ಕರಣವು ಭಾರತೀಯ ಗ್ರಂಥ ಸಂಪಾದನೆಗೆ ಹೊಸ ಆಯಾಮ ನೀಡಿತು. ಮಿಶನರಿಗಳು ಭಾರತೀಯ ಭಾಷೆಗೆ ಸೂಕ್ತವಾಗುವ ತತ್ತ್ವಗಳನ್ನು ಅಳವಡಿಸಿದ್ದರಿಂದ ಇದನ್ನು ಅನುಸರಿಸಿ ದುಡಿದ ಮಹನೀಯರೆಂದರೆ ಮೊದಲಿಗೆ ಮೊರ್ಗ್ಲಿಂಗ್ ಈತನು ತನ್ನ 'ಬಿಬ್ಲಿಯೊಥೆಕಾ ಕರ್ನಾಟಿಕಾ' ಮಾಲಿಕೆಯಲ್ಲಿ ತಾನು ಪತ್ತೆಹಚ್ಚಿದ ಹಲವು ಕನ್ನಡ ಕೃತಿಗಳನ್ನು ಪ್ರಕಟಿಸುತ್ತಾ ಬಂದನು. ಅವುಗಳು 'ಜೈಮಿನಿಭಾರತ', 'ತೊರವೆ ರಾಮಾಯಣ', 'ದಾಸರ ಪದಗಳು', 'ಹರಿಭಕ್ತಿಸಾರ', 'ಕುಮಾರವ್ಯಾಸ ಭಾರತ', 'ಬಸವಪುರಾಣ', 'ಚಿನ್ನಬಸವಪುರಾಣ', ಮುಂತಾದವು.

ಕನ್ನಡ ಗ್ರಂಥ ಸಂಪಾದನೆಯ ಆದ್ಯರೆಂದರೆ ಕರ್ನಲ್ ಕೊಲಿನ್ ಮೆಕೆಂಜಿ ದಕ್ಷಿಣ ಭಾರತದ ಭೂಮಾಪನ ಕೆಲಸಕ್ಕೆ ಬಂದಿದ್ದ ಈತನು ಕೆಲಸ ಮುಗಿಸುವ ಹೊತ್ತಿಗೆ ಶಾಸನ,

---

[11] ಭಾರತೀಯ ಗ್ರಂಥ ಸಂಪಾದನಾ ಪರಿಚಯ, ಎನ್.ಎಸ್. ಲಕ್ಷ್ಮೀನಾರಾಯಣ ಭಟ್ ಪುಟ ೧೩

ಹಸ್ತಪ್ರತಿ, ಪುರಾತನ ವಸ್ತು, ಕೈಫಿಯತ್ತು, ಬಖೈರ, ರಾಜರ ವಂಶಾವಳಿ ಮೊದಲಾದವನ್ನು ಸಂಗ್ರಹಿಸಿದನು. ಇವರದೇ ಆದಂತಹ 'ಮೆಕೆಂಜಿ ಸಂಗ್ರಹ'ದಲ್ಲಿ ಇದು ದಾಖಲಾಗಿದೆ.

ಇವರು ಪ್ರಾಚೀನ ಕಾವ್ಯಗಳನ್ನು ಸಂಗ್ರಹಿಸದೇ ಇದ್ದರೂ, ಹಸ್ತಪ್ರತಿಗಳು ನಾಡಿನ ಅಮೂಲ್ಯ ಆಸ್ತಿ ಎಂದು ತೋರಿಸಿಕೊಟ್ಟರು. ಸುಮಾರು ೬೦೦ಕ್ಕೂ ಹೆಚ್ಚು ಹಸ್ತ ಪ್ರತಿಗಳನ್ನು ಅವರು ಸಂಗ್ರಹಿಸಿರುವುದು ಕಡಿಮೆ ಸಾಧನೆಯಲ್ಲ. ಜೊತೆಗೆ ಮಲೆಯೂರು ದೇವ ಚಂದ್ರನು ರಾಜಾವಳಿ ಕಥಾಸಾರ ಬರೆಯುವುದಕ್ಕೆ ಮೆಕೆಂಜಿ ಪ್ರೇರಣೆಯಾದರು.

ಬಾಸೆಲ್‌ನಿಂದ ಭಾರತಕ್ಕೆ ಕ್ರಿ.ಶ. ೧೮೪೫ರಲ್ಲಿ ಡಬ್ಲ್ಯೂ.ಜಿ.ವರ್ತ್ ಕ್ರೈಸ್ತ ಮಿಶನರಿಯಲ್ಲಿ ಒಬ್ಬರು. ಸಂಸ್ಕೃತ ಭಾಷೆಯನ್ನು ಅಭ್ಯಾಸ ಮಾಡಿ ವಿದೇಶೀಯವರಿಗೆ ಹಳಗನ್ನಡ ಕಾವ್ಯ ಜ್ಞಾನದ ಅಗತ್ಯವನ್ನು ಮನಗೊಂಡು 'ಪ್ರಾಕ್ಕಾವ್ಯಮಾಲಿಕೆ' ಎಂಬ ೫೧೭ ಪುಟಗಳ ಬೃಹದ್ಗ್ರಂಥವನ್ನು ಸಿದ್ಧಪಡಿಸಿದರು. ಇದೊಂದು ಪ್ರಾಚೀನ ಕನ್ನಡ ಕಾವ್ಯಭಾಗಗಳ ಸಂಕಲನವಾಗಿದ್ದು, ಜೈನ, ವೈದಿಕ, ವೀರಶೈವ ಈ ಮೂರು ಧರ್ಮಗಳನ್ನು ಪ್ರತಿನಿಧಿಸುವ ಪದ್ಯಗಳು ಇದರಲ್ಲಿವೆ. ಇದು ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್ಸ್ ಮದ್ರಾಸ್ ಸಂಸ್ಥೆ ಮೂಲಕ ೧೮೬೮ರಲ್ಲಿ ಪ್ರಕಟವಾಯಿತು.

ಜಾನ್‌ಗ್ಯಾರೆಟ್ ಎಂಬುವನು ಇಂಗ್ಲಿಷ್ – ಕನ್ನಡ ಕೋಶ, ಭಗವದ್ಗೀತೆ, ಪಂಚತಂತ್ರ, ಗದ್ಯ, (Classical Distionary of India) ಎಂಬುವುದನ್ನು ರಚನೆ ಮಾಡಿದ್ದಾರೆ. ಕೇಶಿರಾಜನ ಶಬ್ದಮಣಿ ದರ್ಪಣವನ್ನು ಕ್ರಿ.ಶ.೧೮೬೮ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ.

'ಕಿಟೆಲ್' ಕನ್ನಡಕ್ಕಾಗಿ ದುಡಿದ ವಿದೇಶೀ ವಿದ್ವಾಂಸರಲ್ಲಿ ಮತ್ತೊಬ್ಬ ಪ್ರಮುಖರು. ಮತಪ್ರಚಾರಕ್ಕೆಂದು ಬಂದು ಇಲ್ಲಿನ ಭಾಷೆಯನ್ನು ಕಲಿತು ಕನ್ನಡ ವ್ಯಾಕರಣಶಾಸ್ತ್ರದ ಮೇರುಕೃತಿಯಾದ ಶಬ್ದಮಣಿದರ್ಪಣ, ಛಂದಸ್ಸಿನ ಉದ್ಗ್ರಂಥವಾದ ನಾಗವರ್ಮನ ಛಂದೋಂಬುಧಿಯನ್ನು ಪರಿಷ್ಕರಿಸಿ ಪ್ರಕಟಿಸಿದರು. ಗ್ಯಾರೆಟ್‌ರವರ 'ಶಬ್ದಮಣಿದರ್ಪಣ' ಮತ್ತು ಛಂದೋಂಬುಧಿ ಹಲವು ನ್ಯೂನತೆಗಳನ್ನು ಒಳಗೊಂಡಿದ್ದರಿಂದ ಕಿಟೆಲ್ ಪ್ರಾಚೀನ ಶುದ್ಧ ಹಸ್ತಪ್ರತಿಗಳಿಂದ ಮತ್ತೊಮ್ಮೆ ಪ್ರಕಟಿಸಿದ್ದರಿಂದ ಹೆಚ್ಚು ಜನಪ್ರಿಯವಾಯಿತು ಮತ್ತು ಮುಂದಿನ ಪರಿಷ್ಕರಣಗಳಿಗೂ ಆಧಾರವಾಯಿತು.

ನಂತರ ಬಂದ ರೈಸ್‌ರವರು ಹಳಗನ್ನಡ ಗ್ರಂಥ ಪ್ರಕಟಣೆಗಾಗಿಯೆ 'ಬಿಬ್ಲಿಯೊಥೆಕಾ ಕರ್ನಾಟಿಕ' ಎಂಬ ಪ್ರಕಾಶನವನ್ನು ಆರಂಭಿಸಿ ಶಾಸ್ತ್ರಗ್ರಂಥಗಳು ಹಾಗೂ ಭಾರತ, ರಾಮಾಯಣಗಳನ್ನು ಪರಿಷ್ಕರಿಸಿ ಬೆಂಗಳೂರಿನ ಸರ್ಕಾರಿ ಮುದ್ರಣಾಲಯದ ಮೂಲಕ

ಪ್ರಕಟಿಸಿದರು. ಇವರು ಪರಿಷ್ಕರಿಸಿದ ಮೊದಲ ಪ್ರಾಚೀನ ಕಾವ್ಯ ನಾಗಚಂದ್ರನ ಪಂಪರಾಮಾಯಣ. ನಂತರ ಕರ್ನಾಟಕ ಭಾಷಾಭೂಷಣ, ಭಟ್ಟಾ ಕಳಂಕನ ಶಬ್ದಾನುಶಾಸನ ಪಂಪಭಾರತ.

ಹೀಗೆ ಮಿಶನರಿಗಳು ನಮ್ಮ ನಾಡಿನ ಸಾಹಿತ್ಯ ವಲಯದಲ್ಲಿ ಹೊಸಚೈತನ್ಯ ಉಂಟುಮಾಡಿ ಗ್ರಂಥ ಸಂಪಾದನೆಗೆ ಸಾಮಾನ್ಯ ತತ್ವಗಳನ್ನು ರೂಪಿಸಿ ಒಂದು ಶಾಸ್ತ್ರವಾಗಿ ಬೆಳೆಯಲು ಕಾರಣರಾದರು. ನಮ್ಮ ದೇಶೀಯ ವಿದ್ವಾಂಸರು ಇದೇ ಹಾದಿಯಲ್ಲಿ ನಡೆದು ಇವರ ತತ್ತ್ವಗಳನ್ನು ಅನುಸರಿಸಿದ್ದರಿಂದ ನೂರಾರು ಗ್ರಂಥಗಳು ಹೊರಬಂದವು.

**೨. ದೇಶೀ ವಿದ್ವಾಂಸರ ಕೊಡುಗೆ**

ಪಾಶ್ಚಾತ್ಯರು ಹಾಕಿಕೊಟ್ಟ ಮಾರ್ಗದಲ್ಲಿ ನಮ್ಮ ದೇಶೀ ಪಂಡಿತರು ಸಾಗಿದರು. ಕನ್ನಡ ಗ್ರಂಥ ಸಂಪಾದನೆಯ ಚರಿತ್ರೆಯಲ್ಲಿ 'ಮಾಸದ ಪ್ರಕಾಶ'ದಿಂದ ಬೆಳಗುತ್ತಿರುವ ಎರಡು ಪ್ರಥಮ ವರ್ಗದ ತಾರೆಗಳೆಂದರೆ ಎಸ್.ಜಿ.ನರಸಿಂಹಾಚಾರ್ಯರು ಮತ್ತು ಎಂ.ಎ. ರಾಮಾನುಜಯ್ಯಂಗಾರರು.[೧೨] ಆಂಡಯ್ಯನ 'ಕಬ್ಬಿಗರ ಕಾವ'ವನ್ನು ೧೮೯೨ರಲ್ಲಿ ಪರಿಷ್ಕರಿಸಿದರು.

೧೮೯೪ರಲ್ಲಿ ಪದ್ಮರಾಜ ಪಂಡಿತರಿಂದ ಜನ್ನನ 'ಯಶೋಧರ ಚರಿತೆ' ಯು ಸಂಪಾದಿತವಾಗಿ ಬೆಂಗಳೂರಿನ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾಗಿದೆ. ರನ್ನನ 'ಸಾಹಸಭೀಮವಿಜಯ' ನಾಗಚಂದ್ರನ 'ಮಲ್ಲಿನಾಥ ಪುರಾಣ, ೧೮೯೩ರಲ್ಲಿ ಪ್ರಕಟವಾದ ರುದ್ರಭಟ್ಟನ 'ಜಗನ್ನಾಥ ವಿಜಯ' ಇವೆಲ್ಲವು ಹಸ್ತಪ್ರತಿಯನ್ನು ಬಳಸಿ ಅಚ್ಚಾಗಿರುವ ಕೃತಿಗಳು. ತಿರುಮಲಾರ್ಯನ 'ಚಿಕ್ಕದೇವರಾಜವಿಜಯಂ', ಮಂಗರಸನ 'ಜಯನೃಪಕಾವ್ಯ'ವನ್ನು ಎಸ್.ಜಿ. ನರಸಿಂಹಾಚಾರ್ಯರು ಮತ್ತು ಎಂ.ಎ. ರಾಮಾನುಜಯ್ಯಂಗಾರರು ಕರ್ನಾಟಕ ಕಾವ್ಯ ಮಂಜರಿ ಮಾಲೆಯಲ್ಲಿ ಹೊರತಂದಿದ್ದಾರೆ.

೧೮೯೮ರಲ್ಲಿ ಮಹಾಕವಿ ಪಂಪನ 'ವಿಕ್ರಮಾರ್ಜುನ ವಿಜಯ' ವನ್ನು ರೈಸ್ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದನು. ಕೆ.ಬಿ. ಪಾಠಕ್ ರವರಿಂದ ಶ್ರೀ ವಿಜಯನ 'ಕವಿರಾಜಮಾರ್ಗ', ದುರ್ಗಸಿಂಹನ 'ಪಂಚತಂತ್ರ', 'ನೇಮಿಚಂದ್ರನ', 'ಲೀಲಾವತಿಪ್ರಬಂಧ' ಪ್ರಕಾಶಿತವಾಯಿತು.

---

12 ಭಾರತೀಯ ಗ್ರಂಥಸಂಪಾದನೆ, ಎನ್. ಎಸ್. ಲಕ್ಷ್ಮೀನಾರಾಯಣಭಟ್. ಪುಟ ೧೨

ನರಸಿಂಹಾಚಾರ್ ಮತ್ತು ರಾಮಾನುಜಯ್ಯಂಗಾರ್‌ರು ಕರ್ನಾಟಕ ಕಾವ್ಯಮಾಲಿಕೆಯ ಮೂಲಕ ೧೮೯೩ ರಲ್ಲಿ 'ಕರ್ನಾಟಕ ನಿಘಂಟು', 'ಚತುರಾಸ್ಯ ನಿಘಂಟು' ಇವೆರಡನ್ನು ಹಸ್ತ ಪ್ರತಿಗಳಿಂದಲೇ ಪರಿಷ್ಕರಿಸಲಾಗಿದೆ. ೧೮೯೩ ರಲ್ಲಿ 'ಕಬ್ಬಿಗರ ಕೈಪಿಡಿ' ಯನ್ನು ಒಂದೇ ಹಸ್ತಪ್ರತಿಯಿಂದ ಪರಿಷ್ಕರಿಸಿದರು.

ಶಾಸ್ತ್ರೀಯ ಗ್ರಂಥಗಳ ಜೊತೆಗೆ ಈ ಇಬ್ಬರೂ ಕೆಲವು ಅಲಂಕಾರ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ತಿರುಮಲಾರ್ಯನ (೧೮೯೩) 'ಅಪ್ರತಿಮವೀರ ಚರಿತೆ' ಇದು ಕೂಡ ಅಚ್ಚಾಗಿರುವ ಗ್ರಂಥ. ಆದರೆ ಇದಕ್ಕೆ ಯಾವ ಹಸ್ತಪ್ರತಿಯನ್ನು ಬಳಸಿದ್ದಾರೆಂಬುದು ತಿಳಿದಿಲ್ಲ. ಈ ಮಹನೀಯರೇ ೧೮೯೪ ರಲ್ಲಿ 'ಉದಯಾದಿತ್ಯಾಲಂಕಾರ'ವನ್ನು ಪ್ರಕಾಶಿಸಿದರು. ಇದೆ ಗ್ರಂಥವನ್ನು ಪದ್ಮರಾಜ ಪಂಡಿತರೂ, ಹೆಸರುಘಟ್ಟದ ಹೊನ್ನಪ್ಪ ನವರೂ ಪ್ರಕಟಪಡಿಸಿದ್ದಾರೆ. ನರಸಿಂಹಾಚಾರ್ ಮತ್ತು ರಾಮಾನುಜಯ್ಯಂಗಾರ್‌ರ ಅಲಂಕಾರ ಗ್ರಂಥ ಕಾಮದೇವನ 'ಶೃಂಗಾರ ರತ್ನಾಕರ' ವನ್ನು ಗ್ರಂಥವಾಗಿ ಹೊರತಂದರು.

೧೯೦೦ ರಲ್ಲಿ ಎಸ್.ಜಿ. ನರಸಿಂಹಾಚಾರ್ಯರು, ಪಂಪನ ಆದಿಪುರಾಣದ ಹಸ್ತ ಪ್ರತಿಯನ್ನು ಪರಿಷ್ಕರಿಸಿ ಪ್ರಕಟಿಸಿದರು.

ಮೈಸೂರು ಮದ್ರಾಸು ವಿಶ್ವವಿದ್ಯಾನಿಲಯಗಳು ಡಾ: ಆರ್.ಸಿ. ಹಿರೇಮಠ ರವರ ನಾಯಕತ್ವದಲ್ಲಿ ಕನಾರ್ಟಕ ವಿಶ್ವವಿದ್ಯಾನಿಲಯವೂ ಗ್ರಂಥಸಂಪಾದನಾ ಪ್ರಕಟಣ ಕಾರ್ಯದಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಈ ಮೂಲಕ ಫ.ಗು.ಹಳಕಟ್ಟಿಯವರು ತಮ್ಮ ಸ್ವಂತ ಮುದ್ರಣಾಲಯವನ್ನು ಆರಂಭಿಸಿ 'ಶಿವಾನುಭವ' ಮಾಸಿಕದ ಮೂಲಕ 'ವಚನ ವಾಙ್ಮಯ'ದ ಬಹುಭಾಗವನ್ನು ಮತ್ತು ಹರಿಹರನ ರಗಳೆಯನ್ನು ಪ್ರಕಟಿಸಿದರು. ಇದೇ ಅವಧಿಯಲ್ಲಿ ಚನ್ನಪ್ಪ ಉತ್ತಂಗಿ ಯವರು ಸರ್ವಜ್ಞನ ವಚನಗಳನ್ನು ಶಾಸ್ತ್ರೀಯವಾಗಿ ಪರಿಷ್ಕರಿಸಿ ಸಂಪಾದಿಸಿದ್ದಾರೆ (೧೯೨೪).

ಹೀಗೆ ೧೯ನೆಯ ಶತಮಾನದಲ್ಲಿ ಕೆಲವು ಗ್ರಂಥಗಳು ಆಂಶಿಕವಾಗಿ ಮತ್ತೆ ಕೆಲವು ಪೂರ್ಣಗ್ರಂಥಗಳಾಗಿ ಪ್ರಕಟವಾಗಿವೆ. ದೊರೆತ ಒಂದೇ ಹಸ್ತಪ್ರತಿಯಿಂದ ಪ್ರತಿ ಮಾಡಿ ಅಚ್ಚು ಹಾಕಿಸಿದ್ದಾರೆ. ಆದರೆ ಹೆಚ್ಚು ಹಸ್ತಪ್ರತಿಗಳನ್ನು ಉಪಯೋಗಿಸಿ ಪಾಠಾಂತರಗಳ ಪರಿಶೀಲನೆಯೊಡನೆ ಪಾಠ ನಿರ್ಣಯ ಮಾಡಿ, ಪೀಠಿಕೆ ಅನುಬಂಧ ಗಳೊಡನೆ ಪ್ರಕಟವಾದ ಕೃತಿಗಳೆಂದರೆ 'ಶಬ್ದಮಣಿದರ್ಪಣ ಮತ್ತು ಶಬ್ದಾನುಶಾಸನಗಳು ಅನಂತರ ಸಾಹಸಭೀಮ ವಿಜಯ ಮತ್ತು ಮಲ್ಲಿನಾಥ ಪುರಾಣಗಳಿವೆ.[೧೩]

[13] ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ, ಬಿ.ಎಸ್. ಸಣ್ಣಯ್ಯ ಪುಟ ೩

ಹೀಗೆ ಕಾವ್ಯ ಸಂಗ್ರಹಗಳು ಮೊದಲು ತಾಳೆಗರಿಯಿಂದ ಮರುಪ್ರತಿ ಯನ್ನಾಗಿಸಿ ಶುದ್ಧ ಪ್ರತಿಗಳ ರೂಪವನ್ನು ಪಡೆದು, ಆನಂತರ ಮಿಷನರಿಗಳಿಂದ ಮುದ್ರಣ ರೂಪ ಪಡೆದು ಹಲವಾರು ಕೃತಿಗಳು ಅಚ್ಚಾದವು. ವಿದೇಶೀ ಪಂಡಿತರಿಂದ ಗ್ರಂಥ ಸಂಪಾದನಾ ತತ್ವವನ್ನು ಅನುಸರಿಸಿ ನಮ್ಮ ದೇಶೀ ಪಂಡಿತರು ಇದೇ ಹಾದಿಯಲ್ಲಿ ನಡೆದು ಇದನ್ನು ಒಂದು ಶಾಸ್ತ್ರವನ್ನಾಗಿ ಬೆಳೆಸಿದರು. ನಂತರ ಆಧುನಿಕ ವಿದ್ವಾಂಸರೂ ಸಹ ಇದೇ 'ಗ್ರಂಥ ಸಂಪಾದನಾ ಶಾಸ್ತ್ರ' ದ ಮಾರ್ಗವನ್ನು ಅನುಸರಿಸಿದರು.

ಕನ್ನಡದ ಎರಡು ಹಾಗೂ ಮೂರನೆಯ ತಲೆಮಾರಿನ ವಿದ್ವಾಂಸರು ಸ್ವಂತ ಪರಿಶ್ರಮದಿಂದ ಈ ಶಾಸ್ತ್ರಕ್ಕೆ ಪ್ರಾರಂಭಿಕ ತಳಹದಿ ಹಾಕಿದರು. ಅವರಲ್ಲಿ ಪ್ರೊ.ಟಿ.ಎಸ್. ವೆಂಕಣ್ಣಯ್ಯ, ಪ್ರೊ. ಡಿ.ಎಲ್. ನರಸಿಂಹಾಚಾರ್, ಪ್ರೊ. ತೀ ನಂ. ಶ್ರೀ, ಡಾ॥ ಶಿ.ಶಿ. ಬಸವನಾಳ, ಡಾ: ಶಿ.ಚೆ. ನಂದೀಮಠ, ಕುಕ್ಕಿಲ ಕೃಷ್ಣಭಟ್ಟ, ಮುಳಿಯ ತಿಮ್ಮಪ್ಪಯ್ಯ ನವರು ಗ್ರಂಥ ಸಂಪಾದನಾ ಶಾಸ್ತ್ರಕ್ಕೆ ನೀಡಿದ ಕೊಡುಗೆ ಅಗ್ರಗಣ್ಯವಾದುದು.

೧೯ನೇ ಶತಮಾನದ ಕೊನೆಯ ಭಾಗ ೨೦ನೇ ಶತಮಾನದ ಆರಂಭ ಭಾಗವನ್ನು (೧೯೦೦ ರಿಂದ ೧೯೯೯ ರವರೆಗೆ) ಕನ್ನಡ ಸಾಹಿತ್ಯದ "ಅರುಣೋದಯ ಕಾಲ" ಎಂದು ಹೇಳಬಹುದು. ಕುವೆಂಪು. ದ.ರಾ.ಬೇಂದ್ರೆ. ಮಾಸ್ತಿ. ಪು.ತಿ.ನ. ಮೊದಲಾದ ಮಹನೀಯರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಧೀಮಂತರಾಗಿದ್ದಾರೆ. ಇದಕ್ಕೆ ಪೂರಕವಾಗಿ ಶ್ರೀ ವಿಜಯ, ಪಂಪ. ಪೊನ್ನ. ರನ್ನ. ಶಿವಕೋಟ್ಯಾಚಾರ್ಯ, ಚಾವುಂಡರಾಯ, ಹರಿಹರ. ರಾಘವಾಂಕ, ಕುಮಾರವ್ಯಾಸ. ಲಕ್ಷ್ಮೀಶ ಮೊದಲಾದ ಕವಿಗಳೂ ಕೃತಿಕಾರರೂ ಅಲ್ಲದೆ, ವಚನಕಾರರು, ದಾಸರು ಮತ್ತು ಶಾಸ್ತ್ರಕಾರರೂ ಕನ್ನಡ ಸಾಹಿತ್ಯದ ಹರಿಕಾರರಾಗಿ ಮುಂದಣ ಪೀಳಿಗೆಗೆ ಪ್ರೇರಕ ಶಕ್ತಿಯಾಗಿ ನಿಂತು ಭಾಷಾ ವ್ಯುತ್ಪತ್ತಿಗೆ ಕಾರಣರಾದರು.

ಈ ಹಾದಿಯಲ್ಲಿ ನಾಡಿನ ವಿದ್ವಾಂಸರು ಮಾಡಿದ ಸಂಪಾದನಾ ಕಾರ್ಯವನ್ನು ವಿಂಗಡಿಸಬಹುದು ೧. ಯೋಜಿತ ಗ್ರಂಥ ಸಂಪಾದನೆ, ೨. ವೈಯುಕ್ತಿಕ ಸಂಪಾದನೆ, ಯೋಜಿತ ಗ್ರಂಥ ಸಂಪಾದನೆಯ ಅಡಿಯಲ್ಲಿ ಬರುವುದು. ಎಲ್. ಗುಂಡಪ್ಪನವರ 'ಆದಿಪುರಾಣ ಸಂಗ್ರಹ' ಇದರಲ್ಲಿ ಎರಡು ವಿಧಗಳನ್ನು ಕಾಣಬಹುದು.

೧) ಅಚ್ಚಾದ ಕಾವ್ಯಗಳಿಗೆ ಸಂಗ್ರಹ ರೂಪ ನೀಡಿರುವುದು.

೨) ಅಚ್ಚಿನ ಪ್ರತಿಗಳ ಜೊತೆ ಹಸ್ತ ಪ್ರತಿಯನ್ನು ಪರಿಶೀಲಿಸಿ ಕಾವ್ಯ ಸಂಗ್ರಹ ಮಾಡುವುದು ಇನ್ನೊಂದು ರೀತಿ.

ಈ ವಿಧಾನದಲ್ಲಿ ಬಂದಿರುವುದು ಎಲ್.ಗುಂಡಪ್ಪನವರ 'ಆದಿಪುರಾಣ ಸಂಗ್ರಹ' ಇದೇ ರೀತಿ ಎಂ.ಆರ್.ಶ್ರೀಕಂಠಯ್ಯನವರು 'ಪ್ರಭುಲೀಲೆ ಸಂಗ್ರಹ'ವನ್ನು ಸಂಪಾದಿಸಿದ್ದಾರೆ.

### ಅ. ಕನ್ನಡದಲ್ಲಿ ಆದಿಪುರಾಣದ ಗ್ರಂಥದ ಆವೃತ್ತಿಗಳು

ಕನ್ನಡ ಸಾಹಿತ್ಯಕ್ಕೆ ೧,೫೦೦ ವರ್ಷಗಳ ಇತಿಹಾಸವಿದ್ದು ಆದಿಕವಿ ಪಂಪ ರಚಿಸಿದ ಮಹಾಚಲದ ಜೋಡಿ ಶಿಖರಗಳಾದ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ವು ಶ್ರೇಷ್ಠ ಕೃತಿಗಳಾಗಿವೆ. ಅಗ್ರ ಸ್ಥಾನವನ್ನು ಪಡೆದಿರುವ ಆದಿಪುರಾಣವು ಪಂಪನ ಮೇರುಕೃತಿಯಾಗಿದ್ದು ಧರ್ಮ – ಕಾವ್ಯ ಧರ್ಮಗಳ ಸಮನ್ವಯವಾಗಿದೆ.

ಇಂತಹ ಹೆಗ್ಗಳಿಕೆಗೆ ಪಾತ್ರವಾದ ೯೪೧ ರಲ್ಲಿದ್ದ ಪಂಪನ 'ಆದಿಪುರಾಣ'ವು ಸಂಪಾದಿತವಗಿ ಪ್ರಕಟವಾಗಿರುವುದು ೧೯೦೦ ರಲ್ಲಿ. ಮೈಸೂರು ಓರಿಯಂಟಲ್ ಲೈಬ್ರರಿಯು ಪ್ರಾಚೀನ ಸಂಸ್ಕೃತ ಕನ್ನಡ ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆ ಸಂಪಾದನೆ ಪ್ರಕಟಣೆಯ ಮೂಲೋದ್ದೇಶದಿಂದ ಸ್ಥಾಪಿತವಾಯಿತು. ಇದರಿಂದ ಸಂಪಾದಿತವಾಗಿ ಹೊರಬಂದ ಮೊದಲ ಬೃಹದ್ಗ್ರಂಥ 'ಆದಿಪುರಾಣ' ವಾಗಿದೆ.

ಲೂಯಿ ರೈಸ್ ರು ೧೮೮೪ರಲ್ಲೇ ಪ್ರಕಟಿಸಿದ ನಾಗವರ್ಮನ 'ಕರ್ಣಾಟಭಾಷಾಭೂಷಣ'ಕ್ಕೆ ಬರೆದ ಪೀಠಿಕೆಯ ಆಧಾರದಿಂದ ಹೇಳುವುದಾದರೆ – ರೈಸರು ಪೊನ್ನನ ಶಾಂತಿಪುರಾಣ, ರನ್ನದ ಅಜಿತಪುರಾಣ, ಪಂಪನ ಆದಿಪುರಾಣ ಈ ಕಾವ್ಯಗಳನ್ನು ನೋಡಿದ್ದರು. ಇದಕ್ಕೂ ಹಿಂದೆ ೧೮೮೨ರಲ್ಲೇ ಅವರು ಪ್ರಕಟಿಸಿದ "ಪಂಪ ರಾಮಾಯಣ"ವೆಂಬ ರಾಮಚಂದ್ರಚರಿತ ಪುರಾಣ"ಕ್ಕೆ ಬರೆದ ಅವರ ಪೀಠಿಕೆಯ ಆಧಾರದಿಂದ ಹೇಳುವುದಾದರೆ – ೧೮೮೦ರ ವೇಳೆಗೆ ಪಂಪನ ಆದಿಪುರಾಣದ ಒಂದು ಪ್ರತಿ ರೈಸರ ಬಳಿಯಿತ್ತು. ಪಂಪನ 'ವಿಕ್ರಮಾರ್ಜುನ ವಿಜಯ'ದ ಪೀಠಿಕಾ ಭಾಗವನ್ನು ಪರಿಸಮಾಪ್ತಿ ಭಾಗವನ್ನು ಆ ವೇಳೆಗಾಗಲೇ ಅವರು ಓದಿಕೊಂಡಿದ್ದರು. ಅದೇ ಪಂಪಭಾರತವನ್ನು ರೈಸ್‌ರವರು ೧೮೯೩ರ ಹೊತ್ತಿಗೆ ಪರಿಷ್ಕರಿಸಿಟ್ಟುಕೊಂಡಿದ್ದು ೧೮೯೮ರಲ್ಲಿ ಪ್ರಟಿಸಿದ್ದರು. ೧೮೮೨ರಲ್ಲೇ ಜರ್ನಲ್ ಆಫ್ ರಾಯಲ್ ಏಷಿಯಾಟಿಕ್ ಸೊಸೈಟಿಯಲ್ಲಿ "ದಿ ಪೊಯಟ್ ಪಂಪ" ಎಂಬ ಒಂದು ವಿಮರ್ಶನ ಲೇಖನವನ್ನು ಬರೆದಿದ್ದರು. ಪಂಪನನ್ನು ಕುರಿತ ಮೊತ್ತ ಮೊದಲನೆಯ ಲೇಖನ ಇದೇ. ಪಂಪನನ್ನು ಮೊದಲಿಗೆ ಗುರುತಿಸಿದವರೂ, ತಿಳಿದವರೂ, ಗೌರವಿಸಿದವರೂ ರೈಸರೇ. ಅವರು ೧೮೯೩ರಷ್ಟು ಹಿಂದೆಯೇ ಬಿಬ್ಲಿಯೊಥೆಕಾ ಕರ್ನಾಟಿಕಾ ಶ್ರೇಣಿಯಲ್ಲಿ ಪಂಪನ ಆದಿಪುರಾಣದ ಒಂದು ನಕಲನ್ನು ಎತ್ತಿಸಿದ್ದರು. ಅದನ್ನು ಪರಿಷ್ಕರಿಸಿ ಪ್ರಕಟಿಸುವ ಕಾರ್ಯಭಾರ ೧೯೦೦ರಲ್ಲಿ. ಎಸ್.ಜಿ. ನರಸಿಂಹಾಚಾರ್ಯರ ಪಾಲಾಯಿತಷ್ಟೇ. "ಬೆಂಜಮಿನ್ ಲೂಯಿರೈಸ್ ಎಂದರೆ ವಿಸ್ಮೃತಿಯ ಸಾಗರತಳದಿಂದ ಪಂಪನನ್ನೂ, ಪಂಪಕಾವ್ಯ ವಸುಂಧರೆಯನ್ನೂ ಎತ್ತಿತಂದ ವರಾಹಮೂರ್ತಿ. ಬೆಂಜಮಿನ್ ಲೂಯಿರೈಸ್ ಎಂದರೆ ಅಭಿನವ ಹನುಮಂತ ಆತನು ಹೊತ್ತುತಂದ ಸಂಜೀವಿನೀ ಪರ್ವತದಲ್ಲಿ ಸಿಕ್ಕಿದ ಅನರ್ಘ್ಯ ಮೂಲಿಕೆ ಆದಿಪುರಾಣ."[೧೪]

---

[14] ಆದಿಪುರಾಣ, ಎಲ್.ಬಸವರಾಜು ಪುಟ ೪

ಎರಡನೆಯ ಬಾರಿಗೆ ಇದನ್ನು ಸಂಪಾದನೆ ಮಾಡಿದವರು ಎಸ್.ಜಿ. ನರಸಿಂಹಾಚಾರ್ ಇವರು ಶ್ರವಣಬೆಳಗೊಳದ ಒಂದು ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಉಳಿದ ನಾಲ್ಕು ಹಸ್ತ ಪ್ರತಿಗಳ ಸಹಾಯದಿಂದ ಪಾಠಾಂತರಗಳನ್ನು ನೀಡಿದ್ದಾರೆ. ಕೆಲವು ಭಾಗಗಳಿಗೆ ಪಾಠಾಂತರವಿದ್ದು, ಮತ್ತೆ ಕೆಲವು ಭಾಗಗಳಿಗೆಗ ಪಾಠಾಂತರವನ್ನು ನೀಡಿಲ್ಲ. ಹಾಗೆಯೇ ಶಬ್ದಮಣಿದರ್ಪಣದಲ್ಲಿ ಆದಿ ಪುರಾಣದ ಕೆಲವು ಪದ್ಯಗಳು ಬಂದಿರುವುದನ್ನು ಗುರುತಿಸಿದ್ದಾರೆ ಮತ್ತು ಪೀಠಿಕೆಯಲ್ಲಿ ಶ್ರೀಹರ್ಷ, ಕಾಳಿದಾಸ, ಭಾರವಿ ಬಾಣ ಮೊದಲಾದ ಸಂಸ್ಕೃತ ಕವಿಗಳಿಂದ ಪಂಪನು ಪ್ರೇರಿತನಾಗಿರುವುದನ್ನು ತಿಳಿಸಿದ್ದಾರೆ. ಕೆಲವೆಡೆ ಪಾಠಗಳ ಸಂದಿಗ್ದತೆಗಳು ಉಳಿದಿದ್ದರೂ ಪಂಪನ ಮಹಾಕಾವ್ಯ.

ಮೊದಲಬಾರಿಗೆ ಪ್ರಕಟವಾಗಿ ಕನ್ನಡ ಸಾಹಿತ್ಯ ಶ್ರೀಮಂತಿಕೆಯ ಪುನರುಜ್ಜೀವನಕ್ಕೆ ಕಾರಣವಾದ ಎಸ್.ಜಿ. ನರಸಿಂಹಾಚಾರ್‌ರವರ ಕೀರ್ತಿ ಅವರ ಪಾಲಿಗೆ ಸಲ್ಲಬೇಕು.

"ಮಹಾಕವಿ" ಪಂಪನ ಮಹತ್ಕೃತಿಗಳಾದ 'ವಿಕ್ರಮಾರ್ಜುನ ವಿಜಯ'ವು ೧೮೯೮ರಲ್ಲಿ ಪ್ರಕಟವಾಗಿ ೧೯ನೆಯ ಶತಮಾನದ ಸಂಪಾದನಾ ಕೃತಿಗಳಿಗೆ ಮಂಗಳವನ್ನು ಪಠಿಸಿದರೆ ೨೦ನೆಯ ಶತಮಾನಕ್ಕೆ ನಾಂದಿಹಾಡಿದುದು "ಆದಿಪುರಾಣ" ವಾಗಿದೆ.

ಮೂರನೆಯ ಬಾರಿಗೆ ೫೩ ವರ್ಷಗಳ ಬಳಿಕ ೧೯೫೩ರಲ್ಲಿ ಮೊಟ್ಟಮೊದಲ ಬಾರಿಗೆ ಕೆ.ಜಿ. ಕುಂದಣಕಾರ ಮತ್ತು ದಿವಾನ್‌ಬಹದ್ದೂರ್ ವಿ.ಪಿ.ಚೌಗುಲೆರವರು ಮೊದಲ ಮುದ್ರಣವನ್ನೇ ಮೂಲವಾಗಿಟ್ಟುಕೊಂಡು ಮತ್ತು ಮೂಡಬಿದರೆಯ ಶ್ರುತಭಂಡಾರದ ಪ್ರತಿಗಳ ಸಹಾಯದಿಂದ ಆದಿಪುರಾಣವನ್ನು ಸಂಪಾದಿಸಿದರು. ಆದರೆ ಈ ಎರಡು ಹಸ್ತಪ್ರತಿಗಳಲ್ಲಿ ಒಂದು ಅಶುದ್ಧವೂ, ಮತ್ತೊಂದು ತಕ್ಕಮಟ್ಟಿನ ಶುದ್ಧತೆಯನ್ನು ಹೊಂದಿದ್ದರಿಂದ ಮತ್ತಷ್ಟು ಪಾಠಗಳನ್ನು ತಿದ್ದಿಕೊಡುವಲ್ಲಿ ಸಫಲರಾಗಿದ್ದರಿಂದ ಪಾಠಪರಿಷ್ಕರಣ ಕಾರ್ಯ ಅಂದುಕೊಂಡಂತೆ ಪೂರ್ಣಮಾಡಲು ಸಾಧ್ಯವಾಗಲಿಲ್ಲ. ಅವರೇ ಹೇಳಿರುವಂತೆ "ಅರ್ಥ, ಛಂದಸ್ಸು, ಉಪಮೆ, ಬಂಧ ಮುಂತಾದ ವಿಷಯಗಳಿಗೆ ಸರಿ ಹೋಗುವ ಪಾಠಗಳನ್ನು ಉಳಿಸಿಕೊಂಡು ಮಿಕ್ಕ ಪಾಠಗಳನ್ನು ಅಡಿ ಟಿಪ್ಪಣಿಯಲ್ಲಿ ಕೊಡಲಾಗಿದೆ. ವ್ಯಾಕರಣ ದೋಷಗಳನ್ನು ಅನಾವಶ್ಯಕವೆನಿಸಿದ ಪಾಠಗಳನ್ನು ಬಿಟ್ಟುಬಿಟ್ಟಿದೆ" ಎಂದಿದ್ದಾರೆ.

ಈ ರೀತಿ ಹೇಳಿದ್ದರೂ ಕೆಲವೊಂದು ಭಾಗಗಳನ್ನು ಉತ್ತಮ ರೀತಿಯಲ್ಲಿಯೇ ಸಂಪಾದಿಸಿದ್ದಾರೆ. ಪಂಪನು ಹೇಗೆ ಯಾವ ಗ್ರಂಥಗಳಿಂದ ಪ್ರಭಾವಿತನಾಗಿದ್ದಾನೆ, ಪೀಠಿಕೆಯಲ್ಲಿರುವ ವಿಷಯ ವಿಸ್ತಾರ, ಅತ್ಯುತ್ತಮ ಕಥಾಸಾರ, ಪದ್ಯಗಳ ಅಕಾರಾದಿ, ಕಠಿಣ ಶಬ್ದಗಳ ಕೋಶ, ಅನುಬಂಧದಲ್ಲಿರುವ ನಾಮಕೋಶ, ಜೈನ ಪಾರಿಭಾಷಿಕ ಶಬ್ಧಕೋಶ

ಉಪಯುಕ್ತವಾಗಿದ್ದು ಶುದ್ಧಿಪತ್ರ ದೀರ್ಘವಾಗಿದೆ. ಈ ಸಂಪಾದನೆಯನ್ನು ಕುರಿತು ಎಲ್. ಬಸವರಾಜು ಅವರು "ಕೆ.ಜಿ. ಕುಂದಣಗಾರರ ಆದಿಪುರಾಣದ ಪರಿಷ್ಕರಣವು ಮಿಶ್ರಪಾಠದಿಂದಲೂ, ನ್ಯೂನತೆಯಿಂದಲೂ, ಅಧಿಕ ಪಾಠದಿಂದಲೂ ಕಲುಷಿತಗೊಂಡಿದೆ. ಸಂಪಾದನಾ ಶಾಸ್ತ್ರವು ಭಾರತದಲ್ಲಿ ಪ್ರಚಲಿತವಾಗಿದ್ದ ೧೯೫೩ ರಷ್ಟು ಇತ್ತೀಚಿನ ಕಾಲದಲ್ಲಿ ಪರಿಷ್ಕರಣ ಕಾರ್ಯವನ್ನು ಕೈಗೆತ್ತಿಕೊಂಡ ಕುಂದಣಗಾರರು ಮೂಡಬಿದಿರೆಯಲ್ಲಿ, ಶ್ರವಣಬೆಳಗೊಳದಲ್ಲಿ, ಕಾರ್ಕಳದಲ್ಲಿ ಅಷ್ಟೇ ಏಕೆ ಬಸದಿಗಳಲ್ಲಿ ಆದಿಪುರಾಣದ ಪ್ರತಿಗಳನ್ನು ಪರೀಕ್ಷಿಸದೆ ಅವುಗಳೊಳಗಿಂದ ಮೂಲವಾಗಿಟ್ಟುಕೊಳ್ಳಲಿ ಉತ್ತಮವೆಂದು ಒಂದು ಪ್ರತಿಯನ್ನಾದರೂ ನಿರ್ಧರಿಸಿಕೊಳ್ಳಲಾರದೆ ಹೋದುದು ತರವಲ್ಲ" ಎಂಬ ನಿಷ್ಠೂರದ ಮಾತುಗಳನ್ನು ಆಡಿದ್ದಾರೆ.

ನಾಲ್ಕನೆಯದಾಗಿ ಎಲ್. ಬಸವರಾಜುರವರು ಕುಂದಣಗಾರರ ಮತ್ತು ಎಸ್.ಜಿ. ನರಸಿಂಹಾಚಾರ್ ರವರ ಆದಿಪುರಾಣ ಪರಿಷ್ಕರಣ ಕಾರ್ಯ ಸಮರ್ಪಕವಾಗಿಲ್ಲ ಎಂದು ನಿರ್ಧರಿಸಿ ತಮಗೆ ದೊರೆಯುವ ಎಲ್ಲ ಹಸ್ತಪ್ರತಿಗಳನ್ನು ಬಳಸಿಕೊಂಡು 'ಆದಿಪುರಾಣ' ವನ್ನು ಶಾಸ್ತ್ರೀಯವಾಗಿ ಪರಿಷ್ಕರಣೆ ಮಾಡಿದರು.

ಎಲ್. ಬಸವರಾಜುರವರು ವಿವಿಧ ಮೂಲಗಳಿಂದ ಹಸ್ತ ಪ್ರತಿಗಳನ್ನು ಸಂಗ್ರಹಿಸಿ, ವಿಮರ್ಶಿಸಿ, ವಂಶವೃಕ್ಷವನ್ನು ಗುರುತಿಸಿ ಕಾರ್ಯ ಪ್ರವೃತ್ತರಾದರು. ಇವರು ಬಳಸಿಕೊಂಡಿರುವ ಪ್ರತಿಗಳು ಈ ರೀತಿ ಇವೆ.

೧. ೧೩೪೯ ರಲ್ಲಿ ಲಿಖಿತವಾದ ಶ್ರವಣಬೆಳಗೊಳದ ಓಲೆಯ ಪ್ರತಿ. ಇಡೀ ಕನ್ನಡ ನಾಡಿನಲ್ಲಿ ಆಗಲಿ ಹೊರಗಡೆಯೇ ಆಗಲಿ ಇದಕ್ಕಿಂತ ಹಳೆಯದಾದ ಪ್ರತಿ ಇನ್ನೊಂದಿಲ್ಲ. ಇದಕ್ಕೆ 'ಹ' ಎಂಬ ಸಂಕೇತ ನೀಡಿದ್ದಾರೆ.

೨. ಕನ್ನಡ ಅಧ್ಯಯನ ಸಂಸ್ಥೆಯ (ಕೆ, ೭೬೪) ಓಲೆ ಪ್ರತಿ ಇದಕ್ಕೆ 'ಬಿ' ಎಂಬ ಸಂಕೇತವನ್ನು ನೀಡಿದ್ದಾರೆ.

೩. "ಏ, ಧ್ವಿ, ಮೈ' ಎಂಬ ಸಂಕೇತವನ್ನು ನೀಡಿ ಇವು ಎಲ್ಲಿಯವು ಎಂಬ ಅಂಶವನ್ನು ಪ್ರಸ್ತಾಪಿಸಿಲ್ಲ. ಕಾಲ. ಕ್ರಿ.ಶ. ೧೭೭೯

೪. ಮೂಡಬಿದರೆಯ ಜೈನಮಠದ ನಂ.೯೦ನೇ ಪ್ರತಿ. ಇದಕ್ಕೆ "ಐ"ಸಂಕೇತವನ್ನು ನೀಡಿದ್ದಾರೆ – ಕಾಲ ಕ್ರಿ., ಶ. ೧೫೭೮.

೫. ಮೂಡಬಿದಿರೆ ಜೈನಭವನದ ನಂ.೪ನೇ ಪ್ರತಿ. ಇದಕ್ಕೆ "ಓ" ಎಂಬ ಸಂಕೇತ ನೀಡಿದ್ದಾರೆ. ಇದರ ಕಾಲ ಕ್ರಿ.ಶ. ೧೫೬೩.

೬. "ಮೂಡಬಿದಿರೆ ಜೈನಭವನ ನಂ.೮ನೇ ಪ್ರತಿ. ಇದನ್ನು "ಎನ್.ಆರ್. ಕಪ್ಪು" ಎಂಬ ಸಂಕೇತವನ್ನು ನೀಡಿದ್ದಾರೆ.

೭. ಮೂಡಬಿದಿರೆ ಜೈನಮಠದ ನಂ.೪೪೩ನೇ ಪ್ರತಿ. ಇದಕ್ಕೆ "ಎನ್.ಆರ್. ಕೆಂಪು" ಎಂಬ ಸಂಕೇತವನ್ನು ನೀಡಿದ್ದಾರೆ.

೮. ಮೂಡಬಿದಿರೆ ಜೈನಮಠದ ನಂ.೧೭೩ನೇ ಪ್ರತಿ. ಇದಕ್ಕೆ "ಎನ್.ಆರ್. ಹಸಿರು" ಎಂಬ ಸಂಕೇತವನ್ನು ನೀಡಿದ್ದಾರೆ.

ಹೀಗೆ ಎಲ್. ಬಸವರಾಜು ರವರು ಪ್ರತಿಗಳ ಜೊತೆ ಕಾಲವನ್ನು ನಮೂದಿಸಿರುವುದರಿಂದ ಆದಿಪುರಾಣದ ಪರಿಷ್ಕರಣಕ್ಕೆ ಅವರು ಪಟ್ಟಿರುವ ಅಸಾಧಾರಣ ಶ್ರಮವು ಎದ್ದು ಕಾಣುವುದರಲ್ಲಿ ಸಂದೇಹವಿಲ್ಲ.

ಕೊನೆಯದಾಗಿ ಜಿನಸೇನಾಚಾರ್ಯರ ಪೂರ್ವ ಪುರಾಣವನ್ನು ಗುಣಭದ್ರಾ ಚಾರ್ಯರು ಮುಂದುವರಿಸಿ ಮುಗಿಸಿದ ಭಾಗವನ್ನು ಈ ಪರಿಷ್ಕರಣದುದ್ದಕ್ಕೂ ಹೋಲಿಸಿ ನೋಡಿರುವುದು ಅತ್ಯಂತ ಶ್ಲಾಘನೀಯ ಕೆಲಸವಾಗಿದೆ.

೧೯೮೦ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು 'ಆದಿಪುರಾಣ'ವನ್ನು ಕೆ.ಎಲ್. ನರಸಿಂಹ ಶಾಸ್ತ್ರಿಗಳ ಗದ್ಯಾನುವಾದದೊಡನೆ ಪ್ರಕಟಿಸಿದೆ. ಇದು ಕೆಲವು ವೈಶಿಷ್ಟ್ಯಗಳಿಂದ ಕೂಡಿದ್ದು ಸಂಭಾವಿತ ಪಾಠಗಳನ್ನು ಹೇಗೆ ನಿರ್ವಹಿಸಬೇಕಾಗುತ್ತದೆ ಎಂಬುದಕ್ಕೆ ಮಾರ್ಗಸೂಚಿಯಾಗಿದೆ. ಕೆಲವು ಪದಗಳಿಗೆ ಕೊಟ್ಟಿರುವ ಟಿಪ್ಪಣಿಗಳು. ಅನುವಾದಕರ ವಿದ್ವತ್ತನ್ನು ತೋರ್ಪಡಿಸುತ್ತಾರೆ. ಎನ್. ರಂಗನಾಥ ಶರ್ಮ ಅವರು 'ಬಿನ್ನಹ' ದಲ್ಲಿ ಮಾಡಿರುವ ವಿಷಯ ನಿರೂಪಣೆ. ಅರ್ಥಕೋಶ. ಅನುಬಂಧಗಳು. ಅನುವಾದಕರ ಪೀಠಿಕೆಯಲ್ಲಿ ಮಂಡಿಸಿರುವ ವಿಷಯಗಳು ಅನುವಾದಕರ ವಿದ್ವತ್ತನ್ನು ತೋರ್ಪಡಿಸುತ್ತದೆ.

೧೯೯೧ ರಲ್ಲಿ ಶ್ರವಣಬೆಳಗೊಳದ ಚಂದ್ರಗುಪ್ತ ಮಾಲೆಯಲ್ಲಿ ತ.ಸು. ಶಾಮರಾಯರು ಮತ್ತು ಪ. ನಾಗರಾಜಯ್ಯನವರೂ ಕೂಡಿ ಸಿದ್ಧಪಡಿಸಿದ "ಆದಿ ಪುರಾಣದ ದೀಪಿಕೆ" ಪ್ರಕಾಶಿತವಾಗಿದೆ. ಇವರು ಯಾವುದೇ ಹಸ್ತ ಪ್ರತಿಯನ್ನು ಬಳಸದೆ ಇದುವರೆಗೆ ಪ್ರಕಾಶಿತವಾಗಿದ್ದ ಎಲ್ಲಾ ಆವೃತ್ತಿಗಳಲ್ಲಿ ಸೂಕ್ತವೆನಿಸಿದ ಪಾಠವನ್ನು ಅಂಗೀಕರಿಸಿದ್ದಾರೆ.

ಆದಿಪುರಾಣವನ್ನು ೧೯೦೦ರಲ್ಲಿ ಸಂಪಾದಿಸಿದ ಎಸ್.ಜಿ.ನರಸಿಂಹಾಚಾರ್‌ರ ಆವೃತ್ತಿಯನ್ನೇ ಮರುಶೋಧಿಸಿ ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು ೧೯೯೫ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಿಂದ ಮರುಪರಿಷ್ಕರಣವನ್ನು ಮಾಡಿದರು. ಇವರು ಯಾವುದೇ ಹೊಸ ಹಸ್ತ ಪ್ರತಿಗಳನ್ನು ಬಳಸದೆ ಎಸ್.ಜಿ.ನರಸಿಂಹಾಚಾರ್‌ರ ಆವೃತ್ತಿಯಲ್ಲಿದ್ದ ಅಸಮರ್ಪಕ

ಪಾಠಗಳೆಂದು ತೋರಿದ ಕಡೆಗಳಲ್ಲಿ ಬೇರೆ ಆಧಾರಗಳನ್ನು ಅನುಸರಿಸಿ ತಿದ್ದಿ ಪೂರ್ವದ ಪಾಠಗಳನ್ನು ಅಡಿಟಿಪ್ಪಣಿಯಲ್ಲಿ ಸೂಚಿಸಿದ್ದಾರೆ.

ಹೀಗೆ ಕನ್ನಡದ ಮೊಟ್ಟಮೊದಲ ಕೃತಿ ಆದಿಪುರಾಣವನ್ನು ಹಂತ ಹಂತವಾಗಿ ರೈಸ್, ಎಸ್.ಜಿ.ನರಸಿಂಹಾಚಾರ್, ಚೌಗುಲೆ, ಕುಂದಣಕಾರ, ಎಲ್. ಬಸವರಾಜು, ಕೆ.ಎಲ್.ನರಸಿಂಹ ಶಾಸ್ತ್ರಿ, ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು ಈ ಮಹಾಕಾವ್ಯದ ಸವಿಯನ್ನು ಉಣಿಸುತ್ತಾ ಬಂದರು. ಇವರುಗಳ ವಿಶೇಷತೆಯೆಂದರೆ ಪಂಪ ರಚಿಸಿದ ಕೃತಿಯ ಒಂದು ಭಾಗವನ್ನೂ ಬಿಡದೆ ಸಂಪಾದಿಸಿದ್ದಾರೆ. ಆದರೆ ೧೯೫೪ ರಲ್ಲಿ ಮೈಸೂರು ವಿಶ್ವವಿದ್ಯಾ ನಿಲಯದಿಂದ ಪ್ರಕಾಶಿತವಾಗಿರುವ ಎಲ್.ಗುಂಡಪ್ಪನವರು ಸಂಗ್ರಹಿಸಿರುವ 'ಆದಿಪುರಾಣ ಸಂಗ್ರಹ' ವಿಭಿನ್ನ ರೀತಿಯಲ್ಲಿದೆ.

ಇವರು ಸಂಗ್ರಹಕ್ಕಾಗಿ ಉಪಯೋಗಿಸಿದ ಅಕರಗಳ ವಿಷಯವನ್ನು ಈ ಸಂಪ್ರಬಂಧದ ೩ನೇ ಅಧ್ಯಾಯದಲ್ಲಿ ವಿವರವಾಗಿ ಪ್ರಸ್ತಾಪಿಸಲಾಗಿದೆ.

# ಅಧ್ಯಾಯ –೪

## ಗುಂಡಪ್ಪನವರ ಆದಿಪುರಾಣ ಸಂಗ್ರಹದ ಗ್ರಂಥ ಸಂಪಾದನಾ ವೈಶಿಷ್ಟ್ಯ

ಕನ್ನಡದ ಕಾವ್ಯಗಳು ಪ್ರಾರಂಭದಲ್ಲಿ ಸಮಗ್ರವಾಗಿ ಪ್ರಕಟವಾಗತೊಡಗಿದವು ಅನಂತರ ಕಾವ್ಯ ಭಾಗಗಳ ಸಂಗ್ರಹವಾಯಿತು. ಮೊದಲ ಹಂತದಲ್ಲಿ ಪ್ರಾಕ್ಕಾವ್ಯ ಮಾಲಿಕೆ, ಪದ್ಯಸಾರಗಳು ಬಂದವು. ನಂತರ ಪೂರ್ಣಕಾವ್ಯಗಳ ಸಂಗ್ರಹ ಪ್ರಾಂಭವಾಯಿತು. 'ಗದಾಯುದ್ಧ', 'ಆದಿಪುರಾಣ', 'ಯಶೋಧರ ಚರಿತೆ', 'ಪಂಪಭಾರತ' ಈ ಗುಂಪಿಗೆ ಸೇರಿದಂತಹವುಗಳು. ಈ ಕಾವ್ಯ ಪರಂಪರೆ ದೇಶೀಯರ ಸಂಪಾದಕತ್ವದಲ್ಲಿ ಪಠ್ಯಪುಸ್ತಕಗಳ ಸಂಗ್ರಹಗಳಲ್ಲಿ ಕಂಡುಬಂದಿತು. ಈ ಸಮಯದಲ್ಲಿ ಪಠ್ಯಕಾವ್ಯ ಭಾಗಗಳು, ಹಳಗನ್ನಡ, ನಡುಗನ್ನಡ, ಹೊಸಗನ್ನಡ ರೂಪವನ್ನು ಆಯ್ಕೆಯಾದವು. ಮೈಸೂರು ವಿಶ್ವವಿದ್ಯಾನಿಲಯ ಪ್ರಾರಂಭವಾದ ಮೇಲೆ ಎಂ.ಎ. ವಿದ್ಯಾರ್ಥಿಗಳಿಗೆ ಪೂರ್ಣಕಾವ್ಯವನ್ನು, ಸಂಕ್ಷಿಪ್ತ ರೂಪದಲ್ಲಿ ಸಂಗ್ರಹಿಸಿದ ಕಾವ್ಯಗಳು ಅರ್ಥಾತ್. ಕಾವ್ಯ ಸಂಗ್ರಹಗಳು ಬರತೊಡಗಿದವು. ಇವುಗಳಲ್ಲಿ ಮೂರು ವಿಧಗಳನ್ನು ಕಾಣಬಹುದು.

೧. ಪೂರ್ಣಕಾವ್ಯಗಳ ಬಹುಭಾಗ ಸಂಗ್ರಹಿಸಿ ಉಳಿದ ಭಾಗವನ್ನು ಅನುಬಂಧದಲ್ಲಿ ಕೊಡುವುದು. ಕಾವ್ಯಭಾಗಗಳನ್ನು ಸಂಗ್ರಹ ಮಾಡುವ ಒಂದು ವಿಧಾನ. ಉದಾ.ಕನ್ನಡ ಕಾವ್ಯಾಂಜಲಿ, ಕಾವ್ಯಲಹರಿ ಚರಿತ್ರೆ ಇತ್ಯಾದಿ.

೨. ಕಾವ್ಯಗಳನ್ನೇ (ಕಾವ್ಯ ಸಂಗ್ರಹ) ಸಂಕ್ಷಿಪ್ತಗೊಳಿಸುವ ಇನ್ನೊಂದು ವಿಧಾನ.

ಈ ರೀತಿಯ ಸಂಗ್ರಹಗೊಂಡ ಕಾವ್ಯಗಳಲ್ಲಿ ಎಲ್. ಗುಂಡಪ್ಪರವರು ಸಂಪಾದಿಸಿರುವ ಆದಿಪುರಾಣ ಸಂಗ್ರಹ ಒಂದು. ಈ ಗುಂಪಿಗೆ ಸೇರಿರುವ ಕಾವ್ಯಗಳು 'ಪಂಪರಾಮಾಯಣ', 'ಗದಾಯುದ್ಧ' ಮೊದಲಾದ ಪುಸ್ತಕಗಳು ಬಂದವು. ಈ ರೀತಿ ಕೃತಿಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕಾವ್ಯ ಸಂಗ್ರಹಗಳು ಇತಿಹಾಸ ನಿರ್ಮಿಸಿದವು.

ವಿದ್ಯಾರ್ಥಿಗಳಿಗೆ ಬೋಧಿಸಲು ಅನುಕೂಲವಾಗಬೇಕೆಂದು ಬಿ.ಎಂ.ಶ್ರೀಯವರ ನೇತೃತ್ವದಲ್ಲಿ ಈ ಸಂಗ್ರಹಗಳು ಪ್ರಾರಂಭವಾಯಿತು. ಇದರಲ್ಲಿ ಮೊದಲ ಬಾರಿಗೆ ಕಾವ್ಯ ಸಂಗ್ರಹ ರೂಪುಗೊಂಡಿದ್ದು ಎ.ಆರ್. ಕೃಷ್ಣಶಾಸ್ತ್ರಿ ಅವರ ಹರಿಶ್ಚಂದ್ರ ಕಾವ್ಯ. ಇದು ೧೯೩೧ರಲ್ಲಿ ಪ್ರಕಟವಾಯಿತು. ಇದು ಹಳಗನ್ನಡ ಕಾವ್ಯ ಸಂಗ್ರಹಗಳ ಇತಿಹಾಸದಲ್ಲೇ ಮೊದಲನೆಯದು. ನಂತರ ೧೯೩೩ರಲ್ಲಿ ಟಿ.ಎಸ್. ವೆಂಕಣ್ಣಯ್ಯನವರ 'ಕರ್ಣಾಟಕ ಕಾದಂಬರಿ' ಮೂರನೆಯದಾಗಿ ೧೯೩೪ರಲ್ಲಿ ಪ್ರಕಟವಾದ ನಡುಗನ್ನಡದ ಎಂ.ಆರ್. ಶ್ರೀಕಂಠಯ್ಯನವರ 'ಪ್ರಭುಲಿಂಗಲೀಲೆ' ಸಂಗ್ರಹ.[೧೫]

ಹೀಗೆ ಕಾವ್ಯ ಸಂಗ್ರಹಗಳು ಸಾಲು ಸಾಲಾಗಿ ಹೊರಬರಲು ತೊಡಗಿದವು. ಒಂದು ಕಡೆ

---

[15] ಗ್ರಂಥಸಂಪಾದನೆ ಕೆಲವು ಅಧ್ಯಯನ, ವೈ.ಸಿ.ಭಾನುಮತಿ ಪುಟ ೮೫

ಪ್ರಾಚೀನ ಸಾಹಿತ್ಯವನ್ನು ಅಭ್ಯಾಸ ಮಾಡುವವರ ಸಂಖ್ಯೆ ಕ್ಷೀಣಿಸುತ್ತಿರುವುದನ್ನು ಮನಗಂಡ ಆಚಾರ್ಯ ಬಿ.ಎಂ.ಶ್ರೀಯವರು 'ಪ್ರಭುಲಿಂಗಲೀಲೆ' ಸಂಗ್ರಹದ ಮುನ್ನುಡಿಯಲ್ಲಿ ಒಬ್ಬ ಸಂಗ್ರಾಹಕ ಸಂಪಾದಕನಿಗೆ ಇರಬೇಕಾದ ಅರ್ಹತೆಯನ್ನು ಈ ರೀತಿ ಹೇಳಿ ಸ್ಪಷ್ಟಪಡಿಸಿದ್ದಾರೆ. "ಒಂದು ಕಾವ್ಯದ ಸೊಬಗನ್ನು ಒಬ್ಬ ಕವಿಯ ಕವಿತಾಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು. ಇಲ್ಲ ಉತ್ತಮ ಭಾಗಗಳನ್ನಾದರೂ ನೋಡಬೇಕು. ಈ ಸಮಷ್ಟಿದೃಷ್ಟಿ ಸಾಧ್ಯವಾಗುವಂತೆ ಪಾಠಕ್ಕೆ ಪ್ರಮಾಣ ಅತಿಮೀರದಂತೆ ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿದರೆ ವಿದ್ಯಾರ್ಥಿಗಳಿಗೂ ಜನಸಾಮಾನ್ಯಕ್ಕೂ ಹಿತಕರವೂ ಪ್ರಯೋಜನಕರವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹವನ್ನು ಮಾಡುತ್ತದೆ.

ಇದರಲ್ಲಿ ಮುಖ್ಯ ಗಮನ ಕಥಾಸರಣಿ ಕೆಡಬಾರದು. ಒಟ್ಟು ಕಥೆಯ ಸ್ವಾರಸ್ಯಕ್ಕೆ ಪಾತ್ರನಿರೂಪಣಕ್ಕೆ ಭಂಗ ಬರಬಾರದು. ಅವಶ್ಯವಾದ ವರ್ಣನೆಯ ಮತ್ತು ವಿವರಣೆಯ ಸಾರ ಬಿಟ್ಟು ಹೋಗಬಾರದು. ಎಲ್ಲಕ್ಕಿಂತ ಪ್ರಧಾನವಾದದ್ದು ಕವಿ ವ್ಯಕ್ತಿತ್ವಕ್ಕೆ ಆತನ ವಿಶೇಷ ಪ್ರತಿಭೆಗೆ ಲೋಪ ಬರಕೂಡದು. ಇಷ್ಟನ್ನೂ ಸಾಧಿಸುವುದು ಸಂಗ್ರಹಕಾರನ ಕರ್ತವ್ಯ" ಎಂದಿದ್ದಾರೆ.

ಇಂತಹ ಉನ್ನತ ಆದರ್ಶವನ್ನಿಟ್ಟುಕೊಂಡು ಬಂದಂತಹ ಸಂಗ್ರಹ ಎಲ್. ಗುಂಡಪ್ಪನವರ 'ಆದಿಪುರಾಣ ಸಂಗ್ರಹ' ಈ ಯೋಜನೆಗೆ ಬಿ.ಎಂ.ಶ್ರೀಯವರೇ ಇವರನ್ನು ನಿಯೋಜಿಸಿದರೆಂದರೆ ಇವರ ಸಾಮರ್ಥ್ಯದ ಬಗ್ಗೆ ಹೇಳಬೇಕಾಗಿಲ್ಲ.

ಎಲ್. ಗುಂಡಪ್ಪನವರು ವಿದ್ಯಾರ್ಥಿಯಾಗಿರುವಾಗಲೇ ಕೆಲವು ಸ್ವತಂತ್ರ್ಯ ಕೃತಿಗಳನ್ನು ಬರೆದಿದ್ದರು. ಕೆಲವು ಗ್ರಂಥಗಳನ್ನು ಅನುವಾದಿಸಿದ್ದರು. ಕೆಲವನ್ನು ಸ್ವಂತ ರಚಿಸಿದರು ಈ ಹಿನ್ನೆಲೆ ಅವರ ನೆರವಿಗೆ ಬಂದಿತು. 'ಆದಿಪುರಾಣ ಸಂಗ್ರಹ'ವನ್ನು ಸಂಪಾದನೆ ಮಾಡಬೇಕಾದರೆ ವಿದ್ವಾಂಸರಾದವರು ಮಾಡಿಕೊಳ್ಳುವ ಹಲವು ಸಿದ್ಧತೆಗಳನ್ನು ಸಂಗ್ರಹಕ್ರಮ ವಿಧಾನವನ್ನು ನಾವು ಕಾಣಬಹುದು. ಇವರ ಸಂಗ್ರಹಗಳಲ್ಲಿ ಎರಡು ರೀತಿ ವಿಧಾನವಿದೆ.[16] ಒಂದು ಶಿಷ್ಟ ಸಾಹಿತ್ಯಗಳ ಗ್ರಂಥ ಸಂಪಾದನೆ. ಇನ್ನೊಂದು ಜಾನಪದ ಗ್ರಂಥಗಳ ಸಂಪಾದನೆ. ಶಿಷ್ಟ ಸಾಹಿತ್ಯಕ್ಕೆ ಸಂಬಂಧಪಟ್ಟದ್ದರಲ್ಲಿ ಶಿಖರಪ್ರಾಯವಾದುದು ಎಂದರೆ 'ಆದಿಪುರಾಣ ಸಂಗ್ರಹ'. ಜನಪದ ಸಾಹಿತ್ಯ ಸಂಗ್ರಹಕ್ಕೆ ಇವರು ತಮ್ಮ ಸಹೋದರರಾದ ಮತಿಘಟ್ಟ ಕೃಷ್ಣಮೂರ್ತಿ ಅವರೊಡನೆ ಸಂಪಾದಿಸಿದ ನಾಡಪದಗಳು. ಎಲ್. ಗುಂಡಪ್ಪನವರು ಸಂಗ್ರಹಮಾಡಿರುವ ಆದಿಪುರಾಣದಲ್ಲಿ ಈ ಕೆಳಕಂಡ ವಿಧಾನಗಳನ್ನು ಕಾಣಬಹುದು.

---

[16] ಪ್ರೊ.. ಡಿ. ಲಿಂಗಯ್ಯನವರ ಲೇಖನ. ಆದಿಪುರಾಣ ಸಂಗ್ರಹ ವಿಧಾನ ಕುರಿತು (ಅಪ್ರಕಟಿತ)

**ಅ. ಸಂಗ್ರಹವಿಧಾನ**

**೧. ಮೂಲದ ಸಂಗ್ರಹ ರೀತಿ.**

ಕಾವ್ಯ ಸಂಗ್ರಹಗಳಲ್ಲಿ ಜೈನ ಚಂಪೂ ಕಾವ್ಯ ಸಂಗ್ರಹವೇ ಬೇರೆ ವಿಧಾನ, ಷಟ್ಪದಿ ಸಾಂಗತ್ಯ ಕಾವ್ಯ ಸಂಗ್ರಹ ವಿಧಾನವೇ ಬೇರೆ. ಜೈನ ತೀರ್ಥಂಕರ ಕಾವ್ಯಗಳನ್ನು ಮೂಲ ಪುರಾಣಗಳ ಹಿನ್ನೆಲೆಯಲ್ಲಿ ಸಂಗ್ರಹ ಮಾಡಬೇಕು. ಮೂಲಕೃತಿಯನ್ನು ಓದಿದಾಗ ಆಗುವ ಅನುಭವ, ಪರಿಕಲ್ಪನೆ, ಆನಂದ, ಜ್ಞಾನಾನಂದ ಇವೆಲ್ಲವೂ ಸಂಗ್ರಹದಿಂದಲೂ ಆಗಬೇಕು. ಆದಿಪುರಾಣ ಸಂಗ್ರಹವನ್ನು ಓದಿದಾಗ ಈ ಪರಿಯ ಅನುಭವ ಆಗುತ್ತದೆ. ಆದ್ದರಿಂದ ಇದೊಂದು ಮಾದರಿ ಸಂಗ್ರಹವಾಗಿದೆ.

ಗುಂಡಪ್ಪನವರ ಗ್ರಂಥ ಸಂಪಾದನೆಯ ಪಾತ್ರ ಚಿತ್ರಣದಲ್ಲಿ ಧಕ್ಕೆ ಬಾರದಂತೆ ವರ್ಣನೆಗಳನ್ನು ತೀರ ಮಿತವಾಗಿ ಸಂಗ್ರಹಿಸಿದ್ದಾರೆ. ಟಿ.ಎಸ್. ಸಣ್ಣಯ್ಯ ಹೇಳುವಂತೆ "ಗುಂಡಪ್ಪನವರು ಆದಿಪುರಾಣದಂತಹ ದೀರ್ಘಕಾವ್ಯವೊಂದನ್ನು ಕಥೆಗೆ ಕುಂದುಂಟಾಗದಂತೆ ಸಂಗ್ರಹಿಸಿದ್ದಾರೆ"[೧೭] ಎಂಬ ಮಾತು ಸಮಂಜಸವಾಗಿದೆ.

**೨. ಜೈನ ಧರ್ಮದ ಪರಿಚಯ**

ಆದಿಪುರಾಣದ ಪರಿಷ್ಕರಣಗಳನ್ನು ಮಾಡಿದ ಸಂಪಾದಕರಾಗಲಿ, ಮೂಲವನ್ನು ಪ್ರಕಟಿಸಿದ ಸಂಪಾದಕರಾಗಲಿ ಎಲ್ಲರೂ ಕವಿಯ ಕಾಲ, ಕೃತಿಯ ವಸ್ತು, ಆಕರಗಳನ್ನು ಕುರಿತು ಚರ್ಚಿಸಿದ್ದರೂ ಕೃತಿಗೆ ಹಿನ್ನೆಲೆಯಾಗಿ ಜೈನಧರ್ಮದ ಮುಖ್ಯ ಲಕ್ಷಣಗಳನ್ನೆಲ್ಲ ಕೈಪಿಡಿಯಂತೆ ಸಮಗ್ರವಾಗಿ ಯಾರೂ ಪ್ರಸ್ತಾಪಿಸಿಲ್ಲ. ಆದರೆ ಎಲ್. ಗುಂಡಪ್ಪನವರು ಪ್ರತ್ಯೇಕ ಸಣ್ಣ ಗ್ರಂಥವಾಗುವ ಹಾಗೆ ೧೦೦ ಪುಟಗಳಷ್ಟು ಜೈನಧರ್ಮದ ಪರಿಚಯವನ್ನು ನೀಡಿದ್ದಾರೆ. ಇದು ಕೇವಲ ವಿದ್ಯಾರ್ಥಿಗಳಿಗಷ್ಟೇ ಅಲ್ಲದೆ ವಿದ್ವಾಂಸರಿಗೂ ಉಪಯೋಗವಾಗಿರುವುದು ವಿಶೇಷವಾಗಿದೆ. ಜೈನ ಧರ್ಮ ಸಾರವನ್ನು ಇಷ್ಟು ಸರಳವಾಗಿ ಸಾರವತ್ತಾಗಿ ಬೇರೆಯವರು ಸಂಗ್ರಹಿಸಿಲ್ಲ.

ಮೂಲ ಕಾವ್ಯದಲ್ಲಿರುವ ಭವಾವಳಿ ಮೊದಲಾದವು ಜೈನ ಧಾರ್ಮಿಕರಿಗೆ ಪ್ರಿಯವಾಗುತ್ತದೆ. ಆದರೆ ಸಾಮಾನ್ಯ ಓದುಗರಿಗೆ ಸ್ವಲ್ಪ ಕ್ಲಿಷ್ಟವಾಗುತ್ತದೆ. ಈ ಕ್ಲಿಷ್ಟಭಾಗವನ್ನು ಸಂಗ್ರಹದಲ್ಲಿ ಗುಂಡಪ್ಪನವರು ಸರಳಗೊಳಿಸಿದ್ದಾರೆ. ಹೀಗೆ ಇವರ ಎಲ್ಲ ಸಂಪಾದಿತ ಗ್ರಂಥಗಳಲ್ಲಿ ಮುನ್ನುಡಿಯದೇ ಒಂದು ಲೋಕ. ಗುಂಡಪ್ಪನವರ ಆಳವಾದ ಜೈನಧರ್ಮ ಪರಿಚಯಕ್ಕೆ, ಪಾಂಡಿತ್ಯಕ್ಕೆ ಈ ಪೀಠಿಕೆ ನಿದರ್ಶನವಾಗಿದೆ.

---

[17] ಪ್ರಾಚೀನ ಕನ್ನಡ ಗ್ರಂಥಸಂಪಾದನೆ, ಟಿ.ಎಸ್. ಸಣ್ಣಯ್ಯ, ಪುಟ.೧೪

**೩ ವಿಸ್ತೃತ ಪೀಠಿಕಾ ಭಾಗ**

ಕಥಾಸಾರ, ಪಾತ್ರಚಿತ್ರಣ, ತೀರ್ಥಂಕರ ಭವಾವಳಿಗಳ ವಿವರಣೆ ಜೊತೆಗೆ ಪಂಪನ ಕಾಲ, ಕೃತಿಗಳ ಬಗ್ಗೆ ಅವನು ಬಳಸಿದ ಛಂದಸ್ಸಿನ ಲಕ್ಷಣಗಳನ್ನು ಕೊಟ್ಟಿದ್ದಾರೆ ಮತ್ತು ಇಂಗ್ಲೀಷ್ ಗ್ರಂಥ, ಕನ್ನಡ ಗ್ರಂಥ, ಸಂಸ್ಕೃತ ಗ್ರಂಥಗಳ ಆಕರಗಳನ್ನು ಕೊಟ್ಟಿದ್ದಾರೆ. ಗುಂಡಪ್ಪನವರ ತೌಲನಿಕ ಅಧ್ಯಯನಕ್ಕೆ ಈ ಗ್ರಂಥಪಟ್ಟಿ ಸಾಕ್ಷಿಯಾಗಿದೆ.

**(ಅ) ಕ್ಲಿಷ್ಟ, ಸಂದಿಗ್ಧ ಪದಗಳಿಗೆ ಟಿಪ್ಪಣಿ**

ಕ್ಲಿಷ್ಟಕರವಾದ ಪದಗಳಿಗೆ ಸಂಬಂಧಪಟ್ಟ ಅರ್ಥಗಳನ್ನು ಬಹಳ ವಿದ್ವತ್ಪೂರ್ಣವಾಗಿ ನೀಡಿದ್ದಾರೆ. ಪಾರಿಭಾಷಿಕ ಪದಗಳ ಅರ್ಥವನ್ನು ಧರ್ಮದ ವಿವರಗಳೊಡನೆ ತಿಳಿಸಿದ್ದಾರೆ.

ಮುಗುಳ್ ಪದವನ್ನು ಬಳಸುವುದರ ಬಗ್ಗೆ ವಿಶೇಷ ಟಿಪ್ಪಣಿ ಕೊಟ್ಟಿದ್ದಾರೆ. ಱ ಳ ಮತ್ತು ಕುಳದ ಬಗ್ಗೆ ಚರ್ಚೆ ಮಾಡಿದ್ದಾರೆ. ಆದ್ದರಿಂದ ಗ್ರಂಥ ಸಂಪಾದನೆ ಮಾಡಬೇಕಾದರೆ ಸಂದೇಹ ಬಂದ ಕಡೆ ವಿದ್ವಾಂಸರೊಡನೆ ಚರ್ಚಿಸಿದ್ದಾರೆ. ಇದಕ್ಕಾಗಿ ಇತರ ಭಾಷಾ ವಿಧ್ವಾಂಸರ ಜೊತೆ ಸಮಾಲೋಚನೆ ಮಾಡಿದ್ದಾರೆ.

**(ಆ) ಛಂದಸ್ಸಿನ ವಿಚಾರ**

ಆದಿಪುರಾಣ ಚಂಪೂಕಾವ್ಯವಾಗಿದ್ದರೂ ಖ್ಯಾತ ಕರ್ನಾಟಕಗಳಲ್ಲದೆ ಪಿರಿಯಕ್ಕರ, ಲಲಿತರಗಳೆ, ಪೃಥ್ವಿರಗಳೆ, ಮಾಲಿನಿ ರಗಳೆ ಮೊದಲಾದ ಛಂದಸ್ಸುಗಳನ್ನು ಪೀಠಿಕೆಯಲ್ಲಿ ಗುರುತಿಸಲಾಗಿದೆ. ಆದ್ದರಿಂದ ಛಂದಸ್ಸಿನ ಲಕ್ಷಣಗಳನ್ನು ಕೊಟ್ಟಿರುವುದು ಕಾವ್ಯಾಭಿಮಾನಿಗಳಿಗೆ ಉಪಯೋಗವಾಗುತ್ತದೆ. ಸಂಗ್ರಹದಲ್ಲಿ ಬಂದ ಎಲ್ಲ ಛಂದೋರೂಪಗಳನ್ನು ಲಕ್ಷಣಗಳನ್ನು ಸೋದಾಹರಣವಾಗಿ ವಿವರಿಸಿದ್ದಾರೆ.

**೪. ಅನುಬಂಧಗಳ ವೈಶಿಷ್ಟ್ಯ**

ಆದಿಪುರಾಣದ ಸಂಗ್ರಹದ ಕೊನೆಯಲ್ಲಿ ವಿಶೇಷ ಪದಗಳಿಗೆ ಟಿಪ್ಪಣಿ ಮತ್ತು ಅರ್ಥಕೋಶವನ್ನು ಕೊಟ್ಟಿದ್ದಾರೆ. ಅರ್ಥಕೋಶದ ಅನುಬಂಧದಲ್ಲಿ ಪದಗಳಿಗೆ ಕೆಲವೆಡೆ ಅರ್ಥಕೊಡಲಾಗಿದೆ. ಧರ್ಮ:ಪುಟ ೧೧೩, ಟಿಪ್ಪಣಿಗಳು) ಕೆಲವೆಡೆ ಟಿಪ್ಪಣಿ ಕೊಟ್ಟಿದ್ದಾರೆ. ಉದಾಹರಣೆಗೆ ನಂದೀಶ್ವರ ಪದ್ಯ ಪದವನ್ನು ಗಮನಿಸಬಹುದು. (ಪುಟ ೧೧೩) ಸಾಮಾನ್ಯ ಪದಗಳಿಗೂ, ಪಾರಿಭಾಷಿಕ ಪದಗಳಿಗೂ ಎರಡಕ್ಕೂ ಅರ್ಥ ಕೊಡಲಾಗಿದೆ. ಉದಾ: ಜ್ಞಾನ ಚತುಷ್ಟಯ (ಉ. ೧೧೫) ಪದದ ಅರ್ಥವನ್ನು ಗಮನಿಸಬಹುದು.

ಹೀಗೆ ಟಿಪ್ಪಣಿ ವಿಭಾಗದಲ್ಲಿ ಸಾಮಾನ್ಯ ಅರ್ಥಕೋಶ ಮತ್ತು ಪಾರಿಭಾಷಿಕ ಅರ್ಥಕೋಶ ಮತ್ತು ಟಿಪ್ಪಣಿಗಳು ಈ ಮೂರೂ ಸೇರ್ಪಡೆಯಾಗಿದೆ. ಇದಲ್ಲದೆ ಕಾವ್ಯದಲ್ಲಿ ಪ್ರಯೋಗವಾದ ಸಾಮಾನ್ಯ ಪದಗಳ ನೇರಾರ್ಥವನ್ನು ಅರ್ಥಕೋಶದಲ್ಲಿ ಕೊಟ್ಟಿದ್ದಾರೆ. ಸಾಮಾನ್ಯ ಪದಗಳೇ

ಆದರೂ ಜೈನಧರ್ಮದ ಹಿನ್ನೆಲೆಯಲ್ಲಿ ಪಾರಿಭಾಷಿಕ ಅರ್ಥದ ಛಾಯೆಯನ್ನು ಒಳಗೊಂಡಾಗ ಅಂತಹ ಪದಗಳನ್ನು ಟಿಪ್ಪಣಿಗಳಲ್ಲೇ ಸಮಾವೇಶ ಮಾಡಿದ್ದಾರೆ.

**ಉದಾಃ** ತಪಂ (ಪು. ೧೧೫) ಎಂದರೆ ತಪಸ್ಸು. ಇದೊಂದು ಸಾಮಾನ್ಯ ಅರ್ಥ. ಆದರೆ ಜೈನಧರ್ಮದಲ್ಲಿ ವಿಶೇಷ ಅರ್ಥವಾಗುತ್ತದೆ. ಆದ್ದರಿಂದ ತಪಂ ಎನ್ನುವ ಪದವನ್ನು ಅರ್ಥಕೋಶದಲ್ಲಿ ಕೊಟ್ಟಿಲ್ಲ. ಪಾರಿಭಾಷಿಕ ಅರ್ಥವಿವರಣೆಯಲ್ಲಿ ಹೇಳಿದ್ದಾರೆ.

ಪೀಠಿಕೆಯಲ್ಲಿ ಜೈನದರ್ಮದ ಪರಿಕಲ್ಪನೆಗಳನ್ನು ವಿವರಿಸಿರುವುದನ್ನು ಟಿಪ್ಪಣಿ ಪದಗಳಲ್ಲಿ ಸೂಚಿಸಲಾಗಿದೆ. ಉ.ದಾಃ ಆಸ್ರವ ೨೭೫ ವ॥ ಒಂದು ತತ್ತ್ವ (ಪು.೬೩). ಇಲ್ಲಿ ಪದಪ್ರಯೋಗವಾಗಿರುವ ಪಠ್ಯಭಾಗವನ್ನು ಸೂಚಿಸಿದ್ದಾರೆ. ಒಂದು ತತ್ತ್ವ ಎನ್ನುವುದು ಸಾಮಾನ್ಯ ಅರ್ಥವನ್ನು ಸೂಚಿಸುತ್ತದೆ. ಆದರೆ ಪು. ೧೫೪ ಎಂಬ ಸೂಚನೆ ಪೀಠಿಕೆಯಲ್ಲಿ ಅಸ್ರವತತ್ವವನ್ನು ವಿವರಿಸುವುದನ್ನು ಸೂಚಿಸುತ್ತಿದೆ.

ಜೊತೆಗೆ ಟಿಪ್ಪಣಿ ಪದ, ಪ್ರಯೋಗವಾದ ಸಂಖ್ಯೆ, ಪಾರಿಭಾಷಿಕ ವಿವರಣೆ ಕೊಡುವಲ್ಲಿ ಪೀಠಿಕಾ ಭಾಗದಲ್ಲಿ ಇಲ್ಲದ ಅರ್ಥವನ್ನು ಕೊಟ್ಟಿದ್ದಾರೆ. ಟಿಪ್ಪಣಿಯ ಕೊನೆಯ ಭಾಗದಲ್ಲಿ ಕೆಲವು ಸಂಸ್ಕೃತ ಮಾತುಗಳ ಅರ್ಥ ವಿವರಣೆಯನ್ನು ಕೊಟ್ಟಿದ್ದಾರೆ.

**ಉದಾಃ** ನಮಃ ಸಿದ್ಧೇಭ್ಯಃ ೨೨೨ ಸಿದ್ಧರಿಗೆ ನಮಸ್ಕಾರ (ಪು.೧೨೧)

**೫. ಸಂಗ್ರಹ ವಿನ್ಯಾಸ: ಶೀರ್ಷಿಕೆಗಳು**

ಆದಿಪುರಾಣವು ಮೂಲದಲ್ಲಿ ೧೬ ಆಶ್ವಾಸಗಳನ್ನು ಹೊಂದಿದೆ. ಆದರೆ ಎಲ್. ಗುಂಡಪ್ಪನವರು ಇಡೀ ಕೃತಿಯನ್ನು ೩ ಪ್ರಧಾನ ಭಾಗಗಳಾಗಿ ವಿಂಗಡಿಸಿ ಹೆಸರಿಸಿದ್ದಾರೆ. ಪ್ರತಿಯೊಂದು ವಿಭಾಗದಲ್ಲಿ ಕಥೆಯ ಹಿನ್ನೆಲೆಯಲ್ಲಿ ಉಪಶೀರ್ಷಿಕೆಗಳನ್ನು ನೀಡಿದ್ದಾರೆ. ಈ ಶೀರ್ಷಿಕೆಯನ್ನು ಅವಲೋಕಿಸಿದರೆ ಇಡೀ ಕೃತಿಯ ಸಮಗ್ರ ಪರಿಚಯದ ಸಕಲ ದರ್ಶನವಾಗುತ್ತದೆ. ಅವುಗಳು ಈ ರೀತಿ ಇವೆ.

**ಒಳಪಿಡಿ**

ಮುನ್ನುಡಿ
ನೆನೆವರಿಕೆ

**ಆದಿಪುರಾಣ ಸಂಗ್ರಹ**

ಪೀಠಿಕೆ
೧. ಕವಿಪರಿಚಯ
೨. ಜೈನಧರ್ಮ
೩. ಜೈನಪುರಾಣಗಳು
೪. ಆದಿಪುರಾಣ
೫. ಪಂಪನ ಪುರಾಣ ಮಾರ್ಗ
ಅನುಬಂಧಗಳು

ಗ್ರಂಥ

**ಮೊದಲನೆಯ ಭಾಗ**

**ಪೂರ್ವ ಭವಾವಳಿ**

೧. ಪೀಠಿಕೆ

೨. ಮಹಾಬಲಂ : ಸ್ವಯಂಬುದ್ಧೋಪದೇಶಂ ; ಚಾರಣಾದೇಶಂ ; ಜಯವರ್ಮ ಜನ್ಮಾಖ್ಯಾನಂ; ಪ್ರಾಯೋಪಗಮನಂ

೩. ಲಲಿತಾಂಗಂ : ದೇವಲೋಕ ಸುಖಾನುಭವಂ ; ಸ್ವಯಂ ಪ್ರಭಾನುರಾಗಂ ; ದೇವಲೋಕಚ್ಯುತಿ

೪. ವಜ್ರಜಂಘಂ ; ಶ್ರೀಮತಿ ಪೂರ್ವಜನ್ಮ ಕಥಾವಳಿ ; ಚಿತ್ರಪಟ ವ್ಯತಿಹಾರಂ ; ಶ್ರೀಮತೀ ವಜ್ರಜಂಘ ವಿವಾಹಂ : ಚಾರಣ ದರ್ಶನಂ : ಮತಿವರಾದಿಗಳ ಭವಾವಳಿ ; ಶ್ರೀಮತೀ ವಜ್ರಜಂಘ ಸಹಮರಣಂ

೫. ಭೋಗಭೂಮಿಜಂ ; ಪ್ರೀತಿಂಕರ ದರ್ಶನಂ : ಸಮ್ಯಕ್ತ್ವೋಪದೇಶಂ

೬. ಶ್ರೀಧರದೇವಂ : ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿ ; ಶ್ರೀಧರದೇವನ ಧರ್ಮಸಂವೇಗಂ ; ಶತಮತಿ ಪ್ರತಿ ಬೋಧನಂ

೭. ಸುವಿಧಿ : ಧರ್ಮಾಮೃತಾಸ್ವಾದನಂ ; ಅಣುವ್ರತಗ್ರಹಂ ; ಸಮಾಧಿ ಮರಣಂ

೮. ಅಚ್ಯುತೇಂದ್ರಂ

೯. ವಜ್ರನಾಭಿ : ಚಕ್ರವರ್ತಿತ್ವಂ : ಸಂಸ್ಕೃತಿಭೋಗ ನಿಸ್ಪೃಹತೆ ; ಮಹಾವ್ರತ ಗ್ರಹಣಂ : ಮಹಾತಪೋನುಷ್ಠಾನಂ ; ಸಮಾಧಿಮರಣಂ

೧೦. ಸರ್ವಾರ್ಥಸಿದ್ಧಿಯೊಳಹಮಿಂದ್ರಂ

**ಎರಡನೆಯ ಭಾಗ**

**ಆದಿ ತೀರ್ಥಂಕರ ಚರಿತಂ**

೧. ನಾಭಿರಾಜವಿಭವಂ

೨. ಗರ್ಭಾವತರಣಂ

೩. ಜನ್ಮಾಭಿಷೇಕೋತ್ಸವಂ

೪. ವೃಷಬೇಶ್ವರ ವಿವಾಹಂ ; ಕುಮಾರೋದಯಂ

೫. ವಿದ್ಯೋಪದೇಶಂ

೬ ಕೃತಯುಗಾರಂಭಂ

೭. ಆದಿಬ್ರಹ್ಮ ರಾಜ್ಯಾಭಿಷೇಕಂ

೮ ಪರಿನಿಷ್ಕ್ರಮಣ ಕಲ್ಯಾಣಂ : ಸುರರಾಜ ಸೇವೆ : ನೀಳಾಂಜನಾ ನೃತ್ಯಂ ; ಸಂಸಾರ ಸ್ವರೂಪ

ಚಿಂತನಂ : ವೈರಾಗ್ಯೋದಯಂ : ಪರಿನಿಷ್ಕ್ರಮಣಂ

೯. ಆದಿತೀರ್ಥಂಕರ್ತಾರ ತಪಃಪ್ರಭಾವಂ

೧೦. ಯೋಗವ್ಯಾಘಾತಂ : ವ್ಯಾಘ್ಯಾತಪರಿಹಾರಂ

೧೧. ಚರ್ಯಾ ಪರ್ಯಾಟನಂ : ಅಕ್ಷಯ ದಾನಂ

೧೨. ಕೈವಲ್ಯಬೋಧೋದಯ ಮಹಿಮೆ

೧೩. ಭರತನ ಅರ್ಹತ್ಪದಾರ್ಚನಂ

೧೪ ತತ್ತ್ವೋಪದೇಶಂ

೧೫ ಧರ್ಮ ಚಕ್ರಪ್ರವರ್ತನಂ

**ಮೂರನೆಯ ಭಾಗ**

**ಭರತ ಚಕ್ರವರ್ತಿ ಚರಿತ್ರಂ**

೧. ಚಕ್ರ ಪೂಜೆ : ವಿಜಯ ಪ್ರಸ್ಥಾನಂ

೨. ಪೂರ್ವ ದಿಗ್ವಿಜಯಂ; ಮಾಗಧ ದರ್ಪ ದಳನಂ

೩. ದಕ್ಷಿಣ ಪಶ್ಚಿಮ ದಿಗ್ವಿಜಯಂ : ವರತನು ಪ್ರಭಾಸಾಮರ ಜಯಂ : ವಿಜಯಾರ್ಧ ಪರ್ವತಾಗಮನಂ : ಮ್ಲೇಚ್ಛಖಂಡ ವಿಜಯಂ

೪. ಉತ್ತರ ಭರತ ವಿಜಯೋದ್ಯೋಗಂ : ಮೇಘಮುಖ ಪರಾಭವಂ

೫. ವೃಷಭಾದ್ರಿಗಮನಂ ಭರತ ವಿಜಯಪ್ರಶಸ್ತಿ

೬. ವಿದ್ಯಾಧರ ಬಾಂಧವ್ಯಂ : ಪೂರ್ವ ಮ್ಲೇಚ್ಛಖಂಡ ವಿಜಯಂ

೭. ಕೈಲಾಸಗಮನಂ : ವೃಷಭನಾಥಸ್ತುತಿ

೮. ಚಕ್ರಗತಿಸ್ಖಲನಂ : ಪುರೋಹಿತ ವಚನಂ : ದೂತಪ್ರೇಷಣಂ : ಭರತಾನುಜ ತಪೋಗ್ರಹಣಂ

೯. ಭರತ ಬಾಹುಬಲಿಯುದ್ಧಂ : ಬಾಹುಬಲಿ ಕುಮಾರಂಗೆ ಲೇಖನಂ : ಬಾಹುಬಲಿಯ ದರ್ಪೋಕ್ತಿ : ಭರತ ಬಾಹುಬಲಿ ಯುದ್ಧಂ : ಚಕ್ರವರ್ತಿ ಪರಾಭವಂ

೧೦. ಬಾಹುಬಲಿಯ ವೈರಾಗ್ಯಂ : ದೀಕ್ಷಾಗ್ರಹಣಂ : ಕೇವಲ ಜ್ಞಾನೋದಯಂ

೧೧. ಸಾಕೇತಾಗಮನಂ : ಚಕ್ರಾಭಿಷೇಕೋತ್ಸವಂ : ಭರತ ರಾಜ್ಯಭಾರಂ : ವಿಪ್ರಸಂತತಿ ನಿರ್ಮಾಣಂ

೧೨. ಸ್ವಪ್ನದರ್ಶನಂ : ಭಗವದರ್ಹದ್ವಚನಂ : ಪ್ರಿಯಧರ್ಮನೃಪತಿ

೧೩. ಆದಿತೀರ್ಥಂಕರ ಪರಿನಿರ್ವಾಣಂ : ಪರಿನಿರ್ವಾಣ ಕಲ್ಯಾಣಂ : ಭರತ ಶೋಕಾವೇಗಂ

೧೪ ಭರತ ದೀಕ್ಷಾಗ್ರಹಣಂ : ಭರತ ಪುರುತನಯನ ಪರಮ ಸುಖಾವಾಪ್ತಿ

೧೫. ಉಪಸಂಹಾರಂ

**ಟಿಪ್ಪಣಿಗಳು**

**ಅರ್ಥಕೋಶ**

ಹೀಗೆ ನೂತನ ಪದ್ಧತಿಯನ್ನು ಅನುಸರಿಸಿ ಸಮಗ್ರ ಕಥೆಯನ್ನು ಲಕ್ಷ್ಯವಾಗಿಟ್ಟುಕೊಂಡು ವಿಭಾಗ, ಪ್ರಧಾನ ಶೀರ್ಷಿಕೆ, ಉಪಶೀರ್ಷಿಕೆಗಳ ಮೂಲಕ ಕಥಾಸರಣಿ ತಿಳಿಯುವಂತೆ ಮಾಡಿರುವುದನ್ನು ಕಾಣುತ್ತೇವೆ.

**೩. ಪಠ್ಯ ಸಂಗ್ರಹ ವಿಧಾನ**

ಸಂಗ್ರಹ ಮಾಡುವ ವಿಧಾನದಲ್ಲಿ ಎಲ್. ಗುಂಡಪ್ಪನವರು ಅನುಸರಿಸಿದ ವಿಧಾನವೇ ಬೇರೆ. ಈ ರೀತಿ ವಿಧಾನ ಬಳಸಿರುವುದು ಇವರೊಬ್ಬರೇ. ಅವರ ಸಂಗ್ರಹ ವಿಧಾನ ಹೀಗಿದೆ.

೧. ಗದ್ಯ ಮತ್ತು ಪದ್ಯ ಭಾಗಗಳ ಸೇರ್ಪಡೆ

೨. ಪದ್ಯ ಪದ್ಯ ಭಾಗಗಳ ಸೇರ್ಪಡೆ

೩. ಗದ್ಯ ಭಾಗಗಳ ಸಂಗ್ರಹ

೪. ಪದ್ಯ ಭಾಗಗಳ ಸಂಗ್ರಹ- ಪದ್ಯದ ಸಾಲುಗಳ ಸೇರ್ಪಡೆ

೫. ಕೊಂಡಿ ಪದಗಳ ಬಳಕೆ(ಊಹಾಪಾಠ ಅಲ್ಲ)

ಈ ರೀತಿಯಾಗಿ ಇವರ ಸಂಗ್ರಹ ವಿಧಾನವನ್ನು ನೋಡಬಹುದಾಗಿದೆ. ವಿದ್ಯಾರ್ಥಿಗಳು ಸಮಗ್ರವಾದ ಆದಿಪುರಾಣವನ್ನು ಪಠ್ಯವಾಗಿ ವರ್ಷದ ಅವಧಿಯಲ್ಲಿ ಅಭ್ಯಸಿಸಲು ಆಗುವಂತೆ ಎಲ್. ಗುಂಡಪ್ಪನವರು ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು ಈ ವಿಧಾನದಲ್ಲಿ ಸಂಗ್ರಹಿಸಿದ್ದಾರೆ.

ಕೆಲವೊಮ್ಮೆ ಮೂಲದಲ್ಲಿ ಕೆಲವು ಪದ್ಯಗಳನ್ನು ಬಿಡಬೇಕಾದ ಸಂದರ್ಭ ಬಂದಾಗ ಬಿಟ್ಟ ಗದ್ಯ ಅಥವಾ ಪದ್ಯಗಳಲ್ಲಿ ಶಬ್ದಗಳು ಅರ್ಥವತ್ತಾಗಿದ್ದರೆ ಅದನ್ನು ಗದ್ಯಕ್ಕೆ ಅಳವಡಿಸುವ ಕ್ರಮವನ್ನು ಕಾಣಬಹುದು. ಹೀಗೆ ರಸವತ್ತಾದ ಭಾಗಗಳು, ಒಳ್ಳೆಯ ಪದಗಳನ್ನು ಎಲ್ಲಿಯೂ ಬಿಡದೆ ಸಂಗ್ರಹ ಮಾಡಿದ್ದಾರೆ. ಮುಖ್ಯವಾಗಿ ಇವರು ಸಂಪಾದನೆಯಲ್ಲಿ ಲೋಪ-ಆಗಮ-ಆದೇಶ ವಿಧಾನಗಳ ಜೊತೆಗೆ ಸಮನ್ವಯ ವಿಧಾನವನ್ನು ಕಾಣಬಹುದು.

ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಆದಿಪುರಾಣವನ್ನು ಇವರು ಸಂಗ್ರಹ ಮಾಡಿದ ಪರಿಣಾಮವಾಗಿ ಕಾವ್ಯದ ಮೂಲ ದೃಷ್ಟಿಯಿಂದ ಅತಿ ಸೊಗಸಾದ ವರ್ಣನಾ ಭಾಗಗಳು, ಶೃಂಗಾರ ಭಾಗಗಳು ಬಿಟ್ಟು ಹೋಗಿರುವುದು ವಿದ್ಯಾರ್ಥಿಗಳಲ್ಲದ ಓದುಗರಿಗೆ ಈ ಸಂಗ್ರಹ ನಿರಾಸೆ ಉಂಟು ಮಾಡುವುದರ ಜೊತೆಗೆ ಕವಿಯ ಶಾಸ್ತ್ರ ಪರಿಚಯ ಪಾಂಡಿತ್ಯವನ್ನು ಅರಿಯದೆ ಹೋಗುತ್ತಾರೆ. ಇದು ಈ ಸಂಗ್ರಹದ ಮಿತಿಗಳಲ್ಲಿ ಒಂದೆನ್ನಬಹುದು.

ಪ್ರಾಚೀನ ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳಲ್ಲಿ ಆಧುನಿಕರ ರುಚಿ ಅಭಿರುಚಿ

ಉಪಯೋಗಗಳಿಗೆ ಅನುಗುಣವಾಗಿ ಸಂಗ್ರಹಿಸಿ ಪೀಠಿಕೆ, ಟಿಪ್ಪಣಿ, ಅರ್ಥಕೋಶ ಮೊದಲಾದ ಪರಿಕರಗಳೊಂದಿಗೆ ವಿದ್ಯಾರ್ಥಿಗಳಿಗಾಗಿ ಸಂಗ್ರಹ ಪತ್ಯಗಳನ್ನು ಸಿದ್ಧಪಡಿಸುವ ಯೋಜನೆಯೊಂದನ್ನು ಬಿ.ಎಂ.ಶ್ರೀ. ರೂಪಿಸಿದರು. ಆ ಮಾಲೆಯಲ್ಲಿ ೧೯೫೫ರಲ್ಲಿ ಪ್ರಕಟವಾದ ಗ್ರಂಥ 'ಆದಿಪುರಾಣ ಸಂಗ್ರಹ' ಇದಕ್ಕೆ ಮುನ್ನುಡಿ ಬರೆದ ಪುಟ್ಟಪ್ಪನವರು ಹೇಳಿದ ಮಾತುಗಳಿವು.

"ಪಂಪನ ಸಹಜ ಪ್ರತಿಭೆ, ಕೃತಕವಾದ ಧರ್ಮ ಪಾಂಡಿತ್ಯದ ದಾಕ್ಷಿಣ್ಯಕ್ಕೆ ವಶವಾಗಿ ಕೆಲವೆಡೆ ಕಾವ್ಯದ ಕ್ಷೇತ್ರದಲ್ಲಿ ಶಾಸ್ತ್ರದ ವಸಾಹತುಗಳನ್ನು ಕಲ್ಪಿಸಿಕೊಂಡಿದೆ. ಈ ಶಾಸ್ತ್ರ, ಆಯಾ ಧರ್ಮೀಯರಿಗೆ ಎಷ್ಟೇ ಅಗತ್ಯವಿದ್ದರೂ ಶುದ್ಧ ಸಾಹಿತ್ಯದ ದೃಷ್ಟಿಯಿಂದ ನೋಡುವವರಿಗೆ ಅನವಶ್ಯಕವಾದ ಹೊರೆಯಾಗುವುದೇ ಹೆಚ್ಚು ಸಂಭವ. ಆದ್ದರಿಂದ ಸಾಧ್ಯವಾದ ಎಡೆಗಳಲ್ಲೆಲ್ಲ ಈ ವಸಾಹತುಗಳನ್ನು ತೆಗೆದು, ಅಥವಾ ಸಾಹಿತ್ಯ ಕ್ಷೇತ್ರದಲ್ಲಿ ವಿಲೀನಗೊಳಿಸಿ ಸಹಜ ಸಾಹಿತ್ಯಕ್ಷೇತ್ರವನ್ನಷ್ಟೇ ಸಹೃದಯರಿಗೆ ನೀಡುವುದು ಇಂತಹ ಸಂಗ್ರಹಗಳ ಉದ್ದೇಶ. ಈ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ವಿಶ್ವವಿದ್ಯಾಲಯದ ಗಣ್ಯ ಅಧ್ಯಾಪಕರಲ್ಲಿ ಒಬ್ಬರಾದ ಶ್ರೀ. ಗುಂಡಪ್ಪನವರು ಆದಿಪುರಾಣದ ಈ ಸಂಗ್ರಹವನ್ನು ತೃಪ್ತಿಕರವಾಗಿ ಅಳವಡಿಸಿದ್ದಾರೆ." ಎಂದಿದ್ದಾರೆ.[೧೮]

**ಈಗ ಸಂಗ್ರಹವಿಧಾನವನ್ನು ವಿವರವಾಗಿ ಗಮನಿಸೋಣ**

**I. ಪದ್ಯಗಳ ಅನುಕ್ರಮಣಿಕೆಯಲ್ಲಿ ವ್ಯತ್ಯಾಸ** *

ವ॥ ಎಂದು ನಿಜಪ್ರಾಣವಲ್ಲಭವಿಯೋಗ ಶೋಕೋದ್ರೇಕವ್ಯಾಕುಳೆಯಾಗಿರ್ದ ತತ್ಸ್ವಯಂ
ಪ್ರಭಾದೇವಿಯ ಸಮೀಪಕ್ಕೆ ಮಹತ್ತರದೇವಿಯರ್ ಬಂದು

(ಮೂ:೩-೧೫ ಗ ಸಂ .೫೨ ಗ)

ಮುಂ ಪಿಂತೆಂಬುದಿದಲ್ತೆ ನಿ
ಆಂಪಯುಗಕ್ಕೆಲ್ಲಮಿಂತು ಬಾಯೆಣೆವುದೆ ಚಿ:
ಗಾಂಪು ಬಗೆಗೊಂಡು ಜಿನಪತಿ
ಯಂ ಪೂಜಿಸು ಪಡೆವೆಯನಿಯನಂ ಮಱಭವದೊಳ್

(ಮೂ:೩-೪೭, ಸಂ ೫೨ ಪ.ಭಾ.)

---

[18] ಪ್ರೊ. ಜಿ. ಅಶ್ವತ್ಥನಾರಾಯಣರ ಲೇಖನ, ಪುಟ ೧ (ಅಪ್ರಕಟಿತ)

* ಅಡಿಗೆರೆ ಎಳೆದ ಪದ.ವಾಕ್ಯಗಳು ಎಲ್.ಗುಂಡಪ್ಪನವರು ಸಂಗ್ರಹಿಸಿದ ಭಾಗಗಳು

ವ॥ ಎಂಬುದುಮದನೆ ಮನದೆಗೊಂಡು,

ಅನ್ನೆಗಮಾ ಸ್ವಯಂಪ್ರಭೆಯುಮಾ ಲಲಿತಾಂಗವಿಯೋಗದಿಂ ಸಮಾ
ಸನ್ನನಿಜಾಯುವಂತೆ ಗುರುಪಂಚಕಮಂ ನೆನೆಯುತ್ತೆ ಭೋಂಕೆನು
ತ್ತನ್ನಶರೀರೆಯಾಗಿ ದಿವದಿಂದಿಳಿದಳ್ ಗಡಮಪ್ಪುದಂತೆ ಬೆಂ
ಬೆನ್ನನೆ ಬಾರದಂದು ಲಲಿತಾಂಗಿಯ ನಲ್ಮೆಗೆ ಬನ್ನಮಾಗದೇ

(ಮೂ:೩-೧೭, ಸಂ ೫ ಪ.ಭಾ)

ವ॥ ಅಂತು ನಿಶಾಂತಕಾರಕಾಕರದಿಂದದೃಶ್ಯರೂಪಿಯಾಗಿ ಜಂಬೂದ್ವೀಪದ ಪೂರ್ವವಿದೇಹದ ಪುಂಡರೀಕಿಣಿಯೆಂಬ ಪೊೞಲನಾಳ್ವ ವಜ್ರದಂತಭೂಪತಿಗಮಾತನ ಮನೋರಥ ಜನ್ಮಭಮಿಯೆನಿಸಿದ ಲಕ್ಷ್ಮೀಮತಿಮಹಾದೇವಿಗಂ

ಕಾಮನ ಮಂತ್ರದೇವತೆಯೊ ಕಾಮನ ವಿದ್ಯೆಯೊ ಬದ್ಧರಂ ಗೆಲಲ್
ಕಾಮನ ನಿಚ್ಚಮರ್ಚಿಸುವ ಕೈದುವೊ ಕಾಮನ ಮೋಹಪಾಶಮೋ
ಕಾಮನ ಕಾಣ್ಬ ಕೈಪಿಡಿಯೋ ವಿಸ್ಮಯಮಾದಪುದೆಂಬಿನಂ ಮಗಳ್
ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯನೆಯ್ದೆ ತಾಳ್ದದಳ್

(ಮೂ:೩-೧೮, ಸಂ ೫ ಪ.ಭಾ)

ಆಲರ್ವ ಪದಕ್ಕೆ ಬಂದಲೆವ ತೆಂಬೆಲರಿಲ್ಲದೆ ಮಾಣ್ದ ಮಲ್ಲಿಕೋ
ಜ್ಜ್ವಳಮುಕುಳಕ್ಕಮಾದ ಪೊಸಗಂಪನುಗುತ್ತಿರಲರ್ದು ರಾಗದಿಂ
ನಲಿವ ಮದಾಳಿಯಿಲ್ಲದಿನಿಸಂ ತಡೆದಂತರಿಸಿರ್ದ ಪದ್ಮಕು
ಟ್ಮಲವಿಭವಕ್ಕಮೇಂ ದೊರೆಗೆ ವಂದುದೊ ಯೌವನದೇೞ್ಗೆ ಕನ್ನೆಯಾ

(ಮೂ:೩-೧೯, ಸಂ ೫೨ ಪ.ಭಾ)

ಈ ಪರಿಜೀತನುಚ್ಛವಿಯನೀ ಪೊಸಜವ್ವನವೀ ಬೆಡಂಗನೀ
ರೂಪುಮನೀ ಜ್ಞವಿಳಾಸಮುಮನೇನೊಳಕೊಳ್ಗುಮೊ ತಪ್ಪದೀ ಕಳಾ
ಳಾಪೆ ಸುರೇಂದ್ರಕಾಂತೆಯಯೆನುತುಂ ನಡೆ ನೋೞ್ಪವರ್ಗಕ್ಷಿಪಕ್ಷ್ಮವಿ
ಕ್ಷೇಪಣಮೊಂದೆ ಮಾಡುವುದವಳ್ ಮನುಜಾಂಗನೆಯೆಂಬ ಭೇದಮಂ

(ಮೂ:೩-೨೦, ಸಂ ೫೨ ಪ.ಭಾ)

ಪಂಡಿತೆಯೆಂಬ ನೆಗೞ್ತೆಯ
ಕೊಂಡಾಟದ ದಾದಿ ತನ್ನನೋದಿಸುತಿರೆ ಕ
ಯ್ಕೊಂಡ ಕಳಾಪರಿಣತೆಯೊಳ್
ಪಂಡಿತೆಯಿಂದಾಕೆ ಪರಮಪಂಡಿತೆಯಾದಳ್

(ಮೂ:೩-೨೧, ಸಂ ೫೨ ಪ.ಭಾ)

ಎಂದು ನಿಜಪ್ರಾಣವಲ್ಲಭ ವಿಯೋಗ ಶೋಕ ವ್ಯಾಕುಳೆಯಾಗಿರ್ದ ಸ್ವಯಂಪ್ರಭಾದೇವಿಯ ಸಮೀಪಕ್ಕೆ ಮಹತ್ತರದೇವಿಯರ್ ಬಂದು, 'ಇಂದು ಬಾಯೞಿ°ವುದೇ? ಗಾಂಪು ಜಿನಪತಿಯಂ ಪೂಜಿಸು ಮಱುಭವದೊಳನಿಯನಂ ಪಡೆವೆ' ಎಂಬುದು ಮದನೆ ಮನದೆಗೊಂಡು ಗುರುಪಂಚಕಮಂ ನೆನೆಯುತ್ತುತ್ಸನ್ನಶರೀರೆಯಾಗಿ ಪುಂಡರೀಕಿಣಿಯೆಂಬ ಪೊೞಲನಾಳ್ವ ವಜ್ರದಂತಭೂಪತಿಗಂ ಲಕ್ಷ್ಮೀಮತಿಮಹಾದೇವಿಗಂ ಮಗಳ್ ಶ್ರೀಮತಿಯೆಂಬಳಾಗಿ ನವಯೌವನಲಕ್ಷ್ಮಿಯಂ ತಾಳ್ದಿದಳ್; ಪಂಡಿತೆಯೆಂಬ ದಾದಿ ಓದಿಸುತಿರೆ ಪರಮಪಂಡಿತೆಯಾದಳ್.

ಅಲರ್ವ ಪದಕ್ಕೆ ಬಂದಲೆವ ತೆಂಬೆಲರಿಲ್ಲದೆ ಮಾಣ್ದ ಮಲ್ಲಿಕೋ
ಜ್ಜ್ವಲ ಮುಕುಳಕ್ಕಮಾದ ಪೊಸಗಂಪನುಗುೞ್°ರಲರ್ದು ರಾಗದಿಂ
ನಲಿವ ಮದಾಳಿಯಿಲ್ಲದಿನಿಸಂ ತಡೆದಂತರಿಸಿರ್ದ ಪದ್ಮಕು
ಟ್ಮಲ ವಿಭವಕ್ಕಮೇಂ ದೊರೆಗೆವಂದುದೊ ಯೌವನದೇೞ್°ಗೆ ಕನ್ನೆಯಾ

(ಸಂ . ಪ. ೫೩)

**ವಿವರಣೆ**

ಈ ಮೇಲ್ಕಂಡ ಗದ್ಯ ಮತ್ತು ಪದ್ಯಭಾಗವನ್ನು ಮೂಲದೊಂದಿಗೆ ಹೋಲಿಸಿ ಈ ರೀತಿ ಸಂಗ್ರಹ ಮಾಡಿದ್ದಾರೆ. ಹೇಗೆಂದರೆ ಗದ್ಯ ಮತ್ತು ಪದ್ಯ ಭಾಗಗಳನ್ನು ಸಂಗ್ರಹಿಸುವಾಗ ಆಯ್ಕೆ ಮಾಡಿಕೊಂಡ ಭಾಗದ ನಡುವೆ ಇರುವ ಪದ್ಯವನ್ನು ಸಂಗ್ರಹಿಸುವಾಗ ಗದ್ಯ ಭಾಗದ ನಂತರದಲ್ಲಿ ಹಲವು ಕಡೆ ಅಳವಡಿಸಲಾಗಿದೆ.

**ಉದಾ:**

ಮೂಲ ೩.೧೫ರ ಗದ್ಯದಿಂದ ೩-೨೧ ಭಾಗದವರೆಗೂ ಸಂಗ್ರಹ ಮಾಡುವಾಗ ಇದರ ಮಧ್ಯದಲ್ಲಿರುವ ಅಲರ್ವ..... ಕನ್ನೆಯಾ (೩-೧೯) ಪದ್ಯವನ್ನು ಈ ಮೇಲಿರುವ ಗದ್ಯ ಸಂಗ್ರಹ ಭಾಗದ ನಂತರ ಹಾಕಿದ್ದಾರೆ. ಹೀಗೆ ಅಲ್ಲಲ್ಲಿ ಪದ್ಯಾನುಕ್ರಮಣಿಯ ಸ್ಥಳ ಪಲ್ಲಟವಾಗಿರುವುದನ್ನು ಕಾಣುತ್ತೇವೆ.

ಇದೇ ರೀತಿಯ ವ್ಯತ್ಯಾಸಗಳನ್ನು ಹಲವೆಡೆ ಕಾಣುತ್ತೇವೆ. (ಮೂ.೭.೩೦ ಗದ್ಯ ಭಾಗದಿಂದ ೭.೩೨ರ ಗದ್ಯಭಾಗ. ಸಂ : ೧೦೩ನೇ ಗದ್ಯ ಭಾಗ.)

**II. ಗದ್ಯಭಾಗಗಳ ಸಂಗ್ರಹ**

**ಸುದೀರ್ಘ ಸಮಾಸ ಪದಗಳ ಬಳಕೆಯ ಗದ್ಯಭಾಗಗಳು**

ವ॥ ಅಂತನೇಕಸಂವತ್ಸರಂಗಳ್ ಸಲ್ವನೆಗಮೊಂದುದಿವಸಂ ರಜನೀಸಮಯದೊಳನರ್ಘ್ಯ ಮರಕತಮಣಿಶಿಲಾಸಂಪಾದಿತಮೇದಿನೀವಿಭಾಗದೊಳ್ ಅಮರಖಚರಕಿನ್ನರಮಿಥುನ ಸನಾಥ-ವಿಚಿತ್ರಭಿತ್ತಿವಿರಾಜಿತದೊಳತಿಬಹಳಕಾಳಾಗರುಧೂಪಧೂಮಾಮೋದದೊಳತಿವಿಶದ ಮಣಿಪ್ರದೀ-

ಪಿಕೋದ್ಯೋತದೂರೀಕೃತತಮಸ್ತಮ ದೊಳನೇಕರತ್ನರಚಿತ ಪ್ರತಿಪಾದುಕವಿನ್ಯಸ್ತಕಾಂಚನ ಮಂಚೋಪಶೋಭಿತದೊಳ್ ಪಯಃಪಯೋಧಿಫೇನಸಂಕಾಶ ದುಕೂಲೋಪಪ್ರಚ್ಛದಾಚ್ಛಾದಿತ ವಿಚಿತ್ರನೇತ್ರೋಭಯೋಪಧಾನಶಯ್ಯಾ ತಳದೊಳನೇಕವಿ ವಿಳಾಸಿನೀ ವಿಳಾಸಾವಾಸಭವನ-ದೊಳಾ ದಂಪತಿಗಳನ್ಯೋನ್ಯಾಂಗಸ್ಪರ್ಶಸುಖೋನ್ಮೀಳಿತ ವಿಲೋಚನರಂತಂತೆ ನಿದ್ರಾರಸವಶಗತರಾಗಿರ್ದರ್: ಅನ್ನೆಗಮಲ್ಲಿ ಮುಚ್ಚಿರ್ದ ಹರಿನೀಲಗವಾಕ್ಷಜಾಲಕವಾಟ ಪುಟಂಗಳಂ ತೇಱಿಯಲ್ಮೆಱಿದು ಸೂರ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರಕಾಳಾಗರುಧೂಪಂ.

ವ॥ ಅಂತನೇಕ ಸಂವತ್ಸರಂಗಳ್ ಸಲ್ವನೆಗಮೊಂದು ದಿವಸಂ ರಜನೀ ಸಮಯದೊಳ್ ಶಯ್ಯಾತಳದೊಳಾ ದಂಪತಿಗಳ್ ನಿದ್ರಾವಶರಾಗಿರ್ದರ್. ಅನ್ನೆಗಮಲ್ಲಿ ಮುಚ್ಚಿರ್ದ ಗವಾಕ್ಷ ಕವಾಟ ಪುಟಂಗಳಂ ತೇಱಿಯಲ್ ಮಱಿದು ಸೂರ್ಯಕಾಂತದ ಧೂಪ ಗುಂಡಿಗೆ ಯೊಳಳವಱಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರ ಧೂಪಂ.

**ವಿವರಣೆ** :- ಈ ಮೇಲ್ಕಂಡ ಸಂಗ್ರಹಿತ ಗದ್ಯ ಭಾಗವನ್ನು ಒಂದೇ ಗದ್ಯ ಭಾಗದಿಂದ ಸಂಗ್ರಹ ಮಾಡಿದ್ದಾರೆ. ಮೂಲದಲ್ಲಿ ಪಂಪನ ಅನೇಕ ಕಡೆ ದೀರ್ಘ ಗದ್ಯ ಭಾಗಗಳನ್ನು ಬಳಸಲಾಗಿದೆ. ಅಂತಹ ಕಡೆ ಕಥಾ ದೃಷ್ಟಿಯಿಂದ ವರ್ಣನೆಗಳನ್ನು ಬಿಟ್ಟು ಅತಿ ಸಂಕ್ಷಿಪ್ತವಾಗಿ ಗದ್ಯ ಭಾಗವನ್ನು ಸಂಗ್ರಹಿಸಿದ್ದಾರೆ (ಉದಾ: ಮೂ .೫೨೨ ಸಂ.೭೧ ಗ )

**ವಿಶೇಷತೆ** : ಈ ಗದ್ಯಭಾಗದಲ್ಲಿ ಕಂಡುಬರುವ ವಿಶೇಷತೆಯೆಂದರೆ ಕೇಶ ಸಂಸ್ಕಾರಕಾಳಾಗರು ಧೂಪಂ ಎಂಬಲ್ಲಿ ಕಾಳಾಗರು ಎಂಬ ವಿಶೇಷಣವನ್ನು ಬಿಟ್ಟಿದ್ದಾರೆ. ಈ ಒಂದು ಪದವನ್ನು ಬಿಡುವ ಅಗತ್ಯವಿರಲಿಲ್ಲ. ಮತ್ತು ಇಲ್ಲಿ ಕಾಳಾಗರು ಎಬ ವಿಶೇಷಣ ಕಪ್ಪು ಸುಗಂಧದ್ರವ್ಯವೆಂಬ ಅರ್ಥವಷ್ಟೇ ಸೂಚಿಸುವುದರ ಜೊತೆಗೆ ಕಾಳ ಎಂಬ ಶಬ್ದ ಕರಾಳ. ಘೋರ ಎಂಬ ಅರ್ಥದಲ್ಲಿ ಇಲ್ಲಿ ಬಳಕೆಯಾಗಿದೆ ಎಂಬುದನ್ನು ಗಮನಿಸಬೇಕು. ಏಕೆಂದರೆ ಆ ದಂಪತಿಗಳ ಬಳಿಗೆ ಈ ಧೂಪದ ಹೊಗೆ ಸಾವನ್ನು ತರುವಂಥ ಘೋರ ಪರಿಣಾಮವನ್ನು ಉಂಟುಮಾಡುವುದರಿಂದ ಅದು ಅಗಿಲು ಧೂಪವಷ್ಟೇ ಆಗಿರದೆ ಕಾಳಾಗರ ಧೂಪವಾಗಿತ್ತು.

ನಂತರ ದೀರ್ಘ ಗದ್ಯಭಾಗವನ್ನು ಚಿಕ್ಕ ಸಾಲುಗಳಾಗಿ ಸಂಕ್ಷಿಪ್ತಗೊಳಿಸಿದ್ದಾರೆ. ಈ ಭಾಗದಲ್ಲಿ ಬಿಟ್ಟ ಭಾಗಗಳು ಅರ್ಥದ ದೃಷ್ಟಿಯಿಂದ ಸರಿಯಿದ್ದರೂ, ಈ ಸಾಲುಗಳಲ್ಲಿರುವ ಪಂಪನ ವೈಶಿಷ್ಟ್ಯವಾದ ದೀರ್ಘ ಸಂಸ್ಕೃತ ಸಮಾಸ ಪದಗಳು ಬಳಕೆ ಇಲ್ಲಿ ಮರೆಯಾಗಿದೆ.

**ಉದಾ:** ೧) ಮರಕತಮಣಿಶಿಲಾ ಸಂಪಾದಿತ ಮೇದಿನೀ ವಿಭಾಗ

೨. ಅಮರಖಚಿತಕಿನ್ನರಮಿಥುನಸನಾಥವಿಚಿತ್ರಭಿತ್ತಿ

೩. ಕಾಳಾಗರುಧೂಪಧೂಮಾಮೋದ

೪. ಪ್ರದೀಪಿಕೋದ್ಯೋತದೂರೀಕೃತತಮಾಸ್ತಮ

೫. ರಚಿತಪ್ರತಿ ಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್

೬. ದುಕೋಲೋಪಪ್ರಚ್ಛದಾಚ್ಛಾದಿತ

೭. ವಿಚಿತ್ರನೇತ್ರೋಭಯೋಪಧಾನಶಯ್ಯಾತಳ

೮. ವಿಳಾಸಿನೀವಿಳಾಸಾವಾಸಭವನ.

ಈ ದೀರ್ಘ ಸಮಾಸಗಳು ಸಂಗ್ರಹದಲ್ಲಿ ಮರೆಯಾಗಿದೆ. ಎಲ್ಲಕ್ಕಿಂತ ಒಂದು ಮುಖ್ಯ ಸಂಗತಿಯೆಂದರೆ ಇಲ್ಲಿ ಸಂಗ್ರಹಕಾರರಿಗೆ ಒದಗುವ ಸಂದಿಗ್ಧತೆ ವಿಚಾರ. ಒಂದು ಕಡೆ ಸುದೀರ್ಘ ಸಮಾಸ ಪದಗಳನ್ನು ಹಾಗೇ ಕೊಟ್ಟರೆ ವಿದ್ಯಾರ್ಥಿಗಳಿಗೆ ಕಷ್ಟವಾಗುವುದು. ಹಾಗೆಂದು ಬಿಟ್ಟರೆ ಪಂಪನ ವೈಶಿಷ್ಟ್ಯ ಮರೆಯಾಗುತ್ತದೆ. ಇಂಥ ಸಂದಿಗ್ಧ ಪ್ರಸಂಗಗಳನ್ನು ಈ ಗ್ರಂಥದಲ್ಲಿ ಹಲವೆಡೆ ಕಾಣಬಹುದು. ಉದಾ. (ಮೂ.೧-೭೦ ರಿಂದ ೧-೭೮).

**III. ಸೊಗಸಾದ ವರ್ಣನೆಗಳ ಲೋಪ**

೧) ಗದ್ಯ-ಪದ್ಯ ಭಾಗಗಳ ಸಂಗ್ರಹಗಳಲ್ಲಿ ಕೆಲವು ವಿಶೇಷ ವರ್ಣನೆಯನ್ನು ಬಿಟ್ಟಿರುವುದಕ್ಕೆ ಈ ಭಾಗವನ್ನು ಗಮನಿಸಬಹುದು. ಅವುಗಳಲ್ಲಿ ಸೊಗಸಾದ ವರ್ಣನೆಗಳನ್ನು ಬಿಟ್ಟಿರುವುದನ್ನು ಕಾಣುತ್ತೇವೆ.

ವ॥ ಅವಱ ಹಿಳುತ್ತರಶ್ರೇಢಿಯೊಳುದಗ್ರಹಿಮಶಿಖರಿಶಿಖರಶಾರದನೀರದಾಕಾರಸುಧಾಧವ-
ಳಿತೋತ್ತುಂಗಪ್ರಾಸಾದಕೂಟಕೋಟಿಸಂಕೀರ್ಣಮುಂ ಆತ್ಮೀಯಜಾತ್ಯಾನುರೂಪಾಚರಣ
ಪರಿಣತ ಚತುರಜನಪರಿಪೂರ್ಣಮಂ ಅನೇಕವಿದ್ಯಾಧರರಾಜರಾಜದ್ರಾಜವೀಧೀವಿಸ್ತೀರ್ಣ
ಮುಮಾಗಿ.

ಬಳಸಿದ ಪೊನ್ನ ಕೋಂಟೆ ಪುರಲಕ್ಷ್ಮಿಯ ಕೈಗೆಯಲರ್ದ ತಾಣದೊಳ್
ಬಳಸಿದ ಪೊನ್ನಕಾಂಡಪಟದಂತಿರೆ ರುಂದ್ರನರೇಂದ್ರಗೇಹಮಾ
ಲಳತೆಯ ವಕ್ತ್ರಪಂಕಜವಿಳಾಸಮನಾಂತಿರೆ ರಮ್ಯರಾಜತಾ
ಚಳತಿಳರೋಪಮಾನಮೆನೆ ಸುಂದಳಕಾಪುರಮೊಪ್ಪಿ ತೋಱಗುಂ

(ಮೂ.೧-೭೧, ಸಂ. ೧-೧೭೧)

ವ॥ ಅದನಾಳ್ವನಖಿಳಖಚರಪತಿಮಕುಟಮಣಿ ಗಣಕಿರಣರಾಗರಂಜಿತ ಚರಣನಳಿನಯುಗಳಂ
ಉದಿಕೋದಿತನಿಜಕುಲಮಂದರಾಚಳಮಂದಾರಪಾದಪಂ ಅನೇಕ ಸಮರಸಮ್ಮರ್ದನಿರ್ಜಿತಾ-
ರಾತಿಬಳಂ ಅತಿಬಳನೆಂಬಂ; ಆತನ ಮಹಾದೇವಿ ನಯನಮನೋಹರಿ
ಮನೋಹರಿಯೆಂಬಳ್.

ಒಲಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇೞ್ಗೆಯೊಳ್
ನೆಲಸೆ ವಿಳಾಸಮಂಬರಚರಾಮರಕಾಂತೆಯರೆಲ್ಲಂ ಪಳಂ
ಚಲೆಯೆ ನೆಗೞ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯ
ಗ್ಗಲದ ಪೊಗೞ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ

(ಮೂ.೧-೭೨, ಸಂ೧-೧೭ ಗ)

ಹಾವವಿಳಾಸವಿಭ್ರಮಸಮನ್ವಿತರೂಪಕಳಾಪದಾ ಮಹಾ
ದೇವಿಗಮಾ ವಿಯಚ್ಚರಗಣಾಗ್ರಣಿಗಂ ಗುಣರತ್ನವಾರ್ಧಿ ನಾ
ನಾವಿಧ ಸೌಖ್ಯಭಾಜನನುಪಾರ್ಜಿತ ಖೇಚರರಾಜಹೃದ್ಯವಿ
ದ್ಯಾವಿಭವಂ ಮಗಂ ಜಿತವಿರೋಧಿನರೇಂದ್ರಬಳಂ ಮಹಾಬಳಂ

(ಮೂ. ೧-೭೩, ಸಂ.೧-೧೭ ಗ)

ವ॥ ಆ ಮಹಾಬಳಂ ಬಾಲಕಾಲದಿಂ ತಗುಳ್ದಭ್ಯಸ್ತ ಸಮಸ್ತ ವಿದ್ಯಾಧರ ವಿದ್ಯಾಪಾರಗಮಂ ಪರಿಸಮಾಪ್ತಸಕಳಕಳಾವಿಜ್ಞಾನನುಂ ಅಧಿಗತಾಶೇಷ ಶಾಸ್ತ್ರನುಂ ಪರಿಣತಸಕಳಶಸ್ತ್ರನುಮಾಗಿ ಯೌವನಂನೇಱಿಯೆನೇಱಿಯೆ.

ಮೊಗಮುತ್ಫುಲ್ಲಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ ಬಾ
ಹುಗಳಾಜಾನುವಿಳಂಬಿಗಳ್ ತೊಡೆಗಳುಂ ರಂಭಾಮೃದುಸ್ತಂಭಶೋ
ಭೆಗಳಂ ಗೆಲ್ದುವು ವಕ್ಷಮಂಬರಚರಶ್ರೀಗೇಹಮಂಬೊಂದೆ ರೂ
ಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರುಂ

(ಮೂ.೧-೭೪, ಸಂ೧-೧೭ಗ)

ಮನವೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂ
ಬಿನ ಕೋಳ್ಗಂ ತಳವಾಱಲೀರ್ಗ್ಮಲರ್ವಾಸಿಂಗಂ ಕುಳಿರ್ಕೋೞ್ಪಿನಂ
ದನಕಂ ಚಂದನಕಂ ಪಸುರ್ಪೆಸೆವ ಬಾಳ್ವೊಂಪಕ್ಕಮೊಂದೊಂದೆ ತ
ಣ್ಪನಿಯೊಳ್ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ

(ಮೂ. ೧-೭೫, ಸಂ. ೧-೧೭ಗ)

ವ॥ ಅಂತು ಮಹಾಬಳಕುಮಾರಂ ಕುಮಾರಕೇಳೀವಿಳಾಸವಿಶ್ರಾಂತಸ್ವಾಂತಂ ಯುವರಾಜಪದವಿಗೆ ಯೋಗ್ಯನಾಗೆ.

ಬಳವದ್ವಿದ್ವಿಷ್ಟವಿದ್ಯಾಧರಕಟಿಶಿರಶ್ಯುಕ್ತಿಸಂಭೂತಮುಕ್ತಾ
ವಳಿಯೊಳ್ಕಣ್ಣಿಟ್ಟು ತನ್ನೊಳ್ನೆರೆಯಲಿದು ಜಯಶ್ರೀಯ ಮುಂದಟ್ಟಿದೆಕ್ಕಾ
ವಳಿಯೆಂಬಂತಿರ್ದುದಂ ಕಂಠಿಕೆಯನುಭಯವಿದ್ಯಾಧರಶ್ರೇಣಿಗಳ್ ಮಂ
ಗಳಗೀತಾತೋದ್ಯನಾದಂಗಳೊಳೆ ಪುದುವಿನಂ ಕಟ್ಟಿದಂ ಖೇಚರೇಂದ್ರಂ

(ಮೂ. ೧-೭೬, ಸಂ.೧-೧೭ ಗ)

ವ॥ ಅಂತು ಕಟ್ಟಿದಾಗಳ್.

ಹಿಮಶೈಲದೊಳಂ ಜಲಧಿಯೊ
ಳಮೆಂತಭಿನ್ನಾಂಗಿ ಗಂಗೆ ಸಂಗತೆ ಖಚರೋ
ತ್ತಮನೊಳಮಾ ವಿದ್ಯಾಧರ
ಕುಮಾರನೊಳಮಂತೆ ಲಕ್ಷ್ಮೀಸಂಗತೆಯಾದಳ್

(ಮೂ.೧-೭೭. ಸಂ. ೧-೧೭ ಗ)

ಪೆಸರ್ಗಳ್ಕಿತ್ತು ಸಮಸ್ತಖೇಚರಬಲಂ ತೇಜಕ್ಕೆ ಬೆರ್ಚಿತ್ತು ಮುಂ
ಪೊಸಪೊಚ್ಚಂ ಬೆರಸಿರ್ಪ ಭೂಚರಬಲಂ ಮೆಲ್ಪಿಂಗೆ ಮೆಚ್ಚಿತ್ತು ತ
ನ್ನ ಸಮಸ್ತಂ ಪರಿವಾರಮೆಂಬ ಗುಣಸಂಘಾತಂಗಳಂ ತಾಳ್ದಿ ಪೆಂ
ಪೆಸಕಂಬೆತ್ತಿರೆ ಸಂತನಿಂತತಿಬಳಂ ರಾಜ್ಯಂಗೆಯುತ್ತಿರ್ಪಿನಂ

(ಮೂ. ೧-೭೮. ಸಂ.೧-೧೭ಗ)

**ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ**

ವ॥ ಅವಱಿಸೊಳುತ್ತರಶ್ರೇಣಿಯೊಳಲಕಾಪುರವೊಪ್ಪಿ ತೋಱಿಗಂ. ಅದನಾಳ್ವನತಿ ಬಳನೆಂಬಂ. ಆತನ ಮಹಾದೇವಿ ಮನೋಹರಿಯೆಂಬಳ್. ಆ ಮಹಾದೇವಿಗಂ ಆ ವಿಯಚ್ಚರಾಗ್ರಣಿಗಂ ಮಗಂ ಮಹಾಬಳಂ. ಮಹಾಬಳ ಕುಮಾರಂ ಯುವರಾಜ ಪದವಿಗೆ ಯೋಗ್ಯನಾಗೆ ಖೇಚರೇಂದ್ರಂ ಕಂಠಿಕೆಯಂ ಕಟ್ಟಿದಂ ಆತಿಬಳ ರಾಜ್ಯಂ ಗೆಯುತ್ತಿರ್ಪಿನಂ.

(ಮೂ.೧-೭೧ ರಿಂದ ೧-೭೮. ಸಂ.೧-೧೭ರ ಗ)

**ವಿವರಣೆ:** ಮೇಲ್ಕಂಡ ಈ ಸಂಗ್ರಹವನ್ನು ೫ ಗದ್ಯಭಾಗ, ೭ ಪದ್ಯಗಳಿಂದ ಸಂಗ್ರಹಿಸಿದ್ದಾರೆ. ದೀರ್ಘ ಭಾಗಗಳನ್ನು ಅಲ್ಪಭಾಗಗಳನ್ನಾಗಿ ಮಾಡಿರುವುದಕ್ಕೆ ಇದೊಂದು ಉದಾಹರಣೆಯಾಗಿದೆ. ಸಂಗ್ರಹ ಮಾಡದೇ ಇರುವ ಭಾಗಗಳನ್ನು ಬಿಟ್ಟಿರುವುದು ವಿದ್ಯಾರ್ಥಿಗಳ ದೃಷ್ಟಿಯಿಂದ ಸರಿಯಾಗಿದೆ. ಆದರೆ ಮುಖ್ಯವಾಗಿ ಇದರಲ್ಲಿ ಗಮನಿಸಬೇಕಾದ ಅಂಶವೇನೆಂದರೆ ೧-೭೧ರ ಪದ್ಯದ ವರ್ಣನೆ ರಸವತ್ತಾಗಿದೆ. ಅದರಲ್ಲಿ ಪಂಪ ಬಳಸಿರುವ ಕಾಂಡಪಟ ಎನ್ನುವ ಪದ ಪಂಪನ ವೈಶಿಷ್ಟ್ಯತೆಯನ್ನು ಪದಸೃಷ್ಟಿಯನ್ನು ತೋರುತ್ತದೆ. ಆದ್ದರಿಂದ ಇದನ್ನು ಬಿಟ್ಟಿರುವುದು ಸೂಕ್ತವಲ್ಲ. ಅಳವಡಿಸಬೇಕಾಗಿತ್ತು. ಇಂತಹ ಸೊಗಸಾದ ವರ್ಣನೆ ಇಲ್ಲಿ ಲೋಪವಾಗಿರುವುದನ್ನು ಕಾಣುತ್ತೇವೆ.

**IV. ಸಾರವತ್ತಾದ ಭಾಗಗಳ ಸಂಗ್ರಹ**

ರಸವತ್ತಾದ ಭಾಗಗಳು ಎಲ್ಲೂ ಆಚೆ-ಈಚೆ ಹೋಗದೆ ಸಂಗ್ರಹ ಮಾಡಿರುವುದಕ್ಕೆ ಈ ಭಾಗವನ್ನು ಗಮನಿಸಬಹುದು.

ವ॥ ಅಂತು ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಳ್ದಿಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು.

ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯನಾಗಳಾ
ಗಡೆ ಪಸವಣ್ವಿ ನೀಳ್ದ ಪೊಗೆಯುಂ ಕಿಡಿಯುಂ ಬಿಸುಸುಯ್ಯ ಗಾಳಿಯೊಳ್
ತೊಡರ್ದೊಡನುಣ್ಮೆ ಭೋಂಕನೊಗೆತರ್ಪ ಮಹೋರಗನೆಯ್ದೆ ಪಲ್ಗಳ
ಱಿಸ್ಪೊಡೆ ಕಿಡಿವೀಱಿ ನೆತ್ತರೊಱಿದುರ್ಚುಗೆ ಕೊಂಡುದು ತತ್ತಪಸ್ವಿಯಂ

(ಮೂ:೨-೪೦, ಸಂ ೨೫ ಗ.)

ವ॥ ಆ ಪ್ರಸ್ತಾವದೊಳ್.

ಎಸೆವ ವಿಮಾನಘಂಟೆಗಳ ಮೆಲ್ಲುಲಿ ಕಿನ್ನರಗೇಯದೊಳ್ ಪೊದ
ಱಿದಿಸೆಯೆ ವಿಚಿತ್ರಪಾತ್ರಪರಿವರ್ತನಮುಣ್ಮುವ ತೂರ್ಯನಾದದೊಳ್
ಪೊಸಯಿಸೆ ಸೋಂಕಿನೊಳ್ ನಲವ ನಲ್ಲಳಲಂಪನೊಡರ್ಚೆ ಲೀಲೆ ಕ
ಣ್ಣನದಳಮಾಗೆ ಪಾಱಿವ ಮಹೀಧರನೆಂಬ ವಿಯಚ್ಚರೇಂದ್ರನಂ

(ಮೂ:೨-೪೧, ಸಂ. ೨೫ ಗ.)

ವ॥ ಭೋಂಕನೆ ಕಂಡು ವಿಷಮವಿಷಧರವಿಷಪೂರಿತಶರೀರಮನೊಯ್ಯನೊಯ್ಯನೆ ಆಱಿಸಿ ಬಂದು ಕಿವಿಯೊಳ್ ಪಳಂಚಲೆರ್ದೆಯಂ ಪಿಡಿದಲುಗುವ ಸೀಯನಪ್ಪ ಗೀತಾತೋದ್ಯನಾ-ದಕ್ಕಮಿದಿರೊಳೆ ಕಣ್ಗೆವಂದು ಬಗೆಯನುಱಿ ಸೆಱಿವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕನಂಬ-ಟ್ಟೀಗಳೆನ್ನ ತಪಂಬಟ್ಟ ಫಲಮುಂಟಕ್ಕುಮಪ್ಪೊಡೆ ವಿದ್ಯಾಧರನಪ್ಪೆನಕ್ಕೆಂದಾ ವಿದ್ಯಾಧರವಿಮಾ-ನಮಂ ನೋಡಿ.

**ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ**

ವ॥ ಅಂತು ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಕುಂತಳಂಗಳಂ ತೆಮಳ್ದಿಕೊಂಡುಯ್ದು ಮಡಗಿಡಲೆಂದು ಪುತ್ತಿನೊಳಗೆ ಕುತ್ತಿದ ಕಯ್ಯನಾಗಳೆ ಭೋಂಕೆ ನೊಗೆತರ್ಪ ಮಹೋರಗಂ ಪಲ್ಗಳಱಿಸ್ಪೊಡೆ ಕೊಂಡುದು. ಆ ಪ್ರಸ್ತಾವದೊಳ್ ಲೀಲೆ ಕಣ್ಣಸದಳಮಾಗೆ ಪಾಱಿವ ಮಹೀಧರನೆಂಬ ವಿಯಚ್ಚರೇಂದ್ರನಂ ಕಂಡು, ವಿಷಯ ವಿಷಪೂರಿತ ಶರೀರಮನೊಯ್ಯನೊಯ್ಯನೆ ಆಱಿಸಿ ಬಂದು ಕಿವಿಯೊಳ್ ಪಳಂಚಲೆರ್ದೆಯಂ ಪಿಡಿದಲುಗುವ ಸೀಯನಪ್ಪ ಗೀತಾತೋದ್ಯನಾದಕ್ಕಂ ಇದಿರೊಳೆಣ್ಗೆವಂದು ಬಗೆಯನುಱಿ

ನೆಟ್ಟಿವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು. 'ಈಗಳೆನ್ನ ತಪಂಬಟ್ಟ ಫಲಮುಂಟಕ್ಕು ಮಪ್ಪೊಡೆ ವಿದ್ಯಾಧರಪೊನಕ್ಕೆ' ಎಂದು ಆ ವಿದ್ಯಾಧರ ವಿಮಾನಮುಂ ನೋಡಿ.

(ಸಂ .ಪ.೨೫ ಗ.)

**ವಿವರಣೆ:** ಈ ಮೇಲ್ಕಂಡ ಗದ್ಯ ಭಾಗವು ಗುಂಡಪ್ಪನವರು ಸಾರವತ್ತಾದ ಪದಗಳನ್ನು ಬಿಡದೇ ಸಂಗ್ರಹ ಮಾಡಿರುವುದಕ್ಕೆ ಉದಾಹರಣೆಯಾಗಿದೆ. ಜಯವರ್ಮನು ಗುರುವಿನ ಪಾದಮೂಲದಲ್ಲಿ ಜೈನದೀಕ್ಷೆಯನ್ನು ಪಡೆದನು. ಆಗ ಹರಿದು ಬಿಸುಟ ಕೂದಲುಗಳನ್ನು ತನ್ನ ಕೈಯಲ್ಲಿ ಹಿಡಿದು **'ಮಡಗಿಡಲೆಂದು ಪುತ್ತಿನೊಳಗೆ ಕುತ್ತಿದ ತಯ್ಯಾನಾಗಳ್ ಭೋಂಕನೊಗೆತರ್ಪ ಮಹೋರಗಂ ಪಲ್ಗಳ ಟಿಟ್ಟೊಡೆ ಕೊಂಡುದು'** ಎಂದು ಸಂಗ್ರಹ ಮಾಡಿದ್ದಾರೆ (೨-೪೦)

ಬಿಟ್ಟ ಭಾಗದಲ್ಲಿ **ಗಡೆ ಪಸವಲ್ವು ನೀಳ್ದ ಮೊಗೆಯುಂ. ಕಿಡಿಯುಂ ಬಿಸುಮಯ್ಯ ಗಾಳಿಯೊಳ್ ತೊಡರ್ದೊಡನುಣಿ. ನೆತ್ತರೊಟಿಟ್ಟುರ್ಚುಗೆ.....** ತತ್ತಪಸ್ವಿಯಂ ಎಂಬ ಸಾಲುಗಳು ಸಂಗ್ರಹದ ದೃಷ್ಟಿಯಿಂದ ಅಷ್ಟೊಂದು ಮುಖ್ಯವೇನಲ್ಲ. ಹಾಗಾಗಿಯೇ ಇದನ್ನು ಬಿಟ್ಟಿರುವುದರಿಂದ ಅರ್ಥವೂ ಕೆಡದೆ ಸ್ಪಷ್ಟವಾಗಿದೆ. ಇದೇ ರೀತಿ ಮತ್ತೊಂದು (ಉದಾಹರಣೆ ಇದೇ ಭಾಗದ ಮೂಲ ಪದ್ಯ ೨-೪೧).

**V. ಗದ್ಯಭಾಗ ಸಂಗ್ರಹ**

**ದೀರ್ಘ ಗದ್ಯ ಭಾಗವನ್ನು ಬಳಸಿ ಗದ್ಯ ಭಾಗ ಸಂಗ್ರಹ ಮಾಡಿರುವುದು.**

ವ॥ ಎಂದು ತದ್ಗಗನಚಾರಣಮುನಿಗುಣಮಣಿಹಾರಮನಾತ್ಮೀಯಹೃದಯದೊಳನಿಬರುಂ ತಾಳ್ದಿ ಸಮ್ಯಗ್ದರ್ಶನಮನಸ್ಖಲಿತಮಾರಾಧಿಸಿ ಪಲ್ಯೋಪಮತ್ರಯಾಯುಷ್ಯಾವಸಾನದೋ-ಷೋಷಧಿಗಳಂತೆ ಫಳಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ.

(ಮೂ. ೫-೭೯ ಗ ಪು.೨೦೯)

ಮನೆಯಿಂದಂ ಮನೆಗೆಂದು ಪೋಪ ತೆಱದಿಂ ಮೇಣ್ ನೂಕೆ ಪಾಸೆಂಬ ಮಾ
ತಿನ ಪಾಂಗಿಂದನಿತುಂ ಯುಗಂ ತಳರ್ದು ತದ್ಭೋಗಾವನೀಭಾಗದೊಳ್
ತನುಗಳ್ ವೈಕ್ರಿಯಕಂಗಳಂತೆ ಕರಗುತ್ತಿತ ರ್ಪನ್ನೆಗಂ ಪುಣ್ಯಸಂ
ಜನಿತೈಶ್ವರ್ಯದಿನಿಂತು ಬಂದು ನೆಲಸಿತ್ತೀಶಾನಕಲ್ಪಾಗ್ರದೊಳ್

(ಮೂ.೫-20, ಸಂ-ಲ೫(೨)ರ ಗ)

ವ॥ ಅಲ್ಲಿ ವಜ್ರಜಂಘಾರ್ಯಂ ಸುರತಸುಖನಿವಾಸದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರ-ನೆಂಬ ದೇವನಾದಂ. ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ-ಪತ್ತುವಿಟ್ಟು ತತ್ಸ್ವಯಂಪ್ರಭವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬ ದಿವಿಜನಾದಂ; ವರಾಹಾರ್ಯನುಂ ಶಾರ್ದೂಲಾರ್ಯನುಂ ಚಿತ್ರಾಂಗವಿಮಾನದೊಳ್ ಚಿತ್ರಾಂಗದಾಮರ ನಾದಂ; ವರಾಹಾರ್ಯನುಂ ನಂದನ ವಿಮಾನದೊಳ್ ಮಣಿಮುಕುಟಕೇ-ಯೂರಮಣಿಕುಂಡಲಭೂಷಣನಾಗಿ ಮಣಿಕುಂಡಲನೆಂಬೊಂದಿವಿಜನಾದಂ ವಾನರಾರ್ಯನುಂ

ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿವಿಷನಾದಂ: ನಕುಳಾರ್ಯನುಂ ಪ್ರಭಾಕರವಿಮಾನದೊಳ್ ಮನೋರಥಾವಾಪ್ತದಿವ್ಯ ಭೋಗಂ ಮನೋರಥನೆಂಬ ಕಲ್ಪಜನಾದಂ: ಇಂತಿನಿಬರುಂ ಸಹಾಯರೊಡನೆ.

**ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ**

ಆತ್ಮೀಯ ಹೃದುಯದೊಳನಿಬರುಂ ತಾಳ್ದಿ ಸಮ್ಯಗ್ದರ್ಶನಮನಸ್ಖಲಿತಮಾರಾಧಿಸಿ ಆಯುಷ್ಯಾವಸಾನದೊಳ್ ವಜ್ರಜಂಘಾರ್ಯಂ ಶ್ರೀಪ್ರಭ ವಿಮಾನದೊಳ್ ಶ್ರೀಧರನೆಂಬ ದೇವನಾದಂ. ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬನಾದಂ.

(ಮೂ.ಸಂ. ೮೫-೨ ಗ. ಮೂ. ೫-೭೯ ಗ)

ಈ ಗದ್ಯಭಾಗಗಳ ಸ್ಥಂಗ್ರಹದಲ್ಲಿ ವಜ್ರಜಂಘಾರ್ಯನ ಭವಾವಳಿಯನ್ನು ಹೇಳುವಲ್ಲಿ ಅವನು ಶ್ರೀಪ್ರಭ ವಿಮಾನದಲ್ಲಿ ಶ್ರೀಧರ ದೇವನಾಗಿ ಜನಿಸಿದ ನಂತರ ಸ್ವಯಂಪ್ರಭೆಯಲ್ಲಿ ಜನಿಸುವ ಈ ಎರಡು ಗದ್ಯವಾಕ್ಯಗಳ ನಡುವೆ ೪ ಜನ ಸಹಾಯದ ವಿವರ ಬಿಟ್ಟಿದೆ. ಇಲ್ಲಿ ಶ್ರೀಧರ ದೇವರ ವಿಷಯ ಮುಖ್ಯವಾಗಿರುವುದರಿಂದ ಸಹಾಯಕರ ವಿವರ ಬಿಟ್ಟಿದ್ದು ಸೂಕ್ತವಾಗಿದೆ.

**VI. ಗದ್ಯಪದ್ಯ ಭಾಗ ಸಂಗ್ರಹ**

ವ॥ ಎಂದು ಬೆಸಗೊಂಡೊಡೆ ಆತನಭವ್ಯನಲ್ಲಂ ಭವ್ಯನೇ. ಭವ್ಯನಾಗಿಯುಮಾಸನ್ನಭವ್ಯಂ: ಎಂತೆಂದೊಡೆ ಜಂಬೂದ್ವೀಪದ ಅಪರವಿದೇಹದೊಳ್ ಗಂಧಿಳಮೆಂಬುದು ವಿಷಯಂ: ಆ ವಿಷಯವಿಳಾಸಿನಿಗೆ ತಿಳಕಮಿರ್ಪಂತಿರ್ದುದು ವಿಜಿತಸುರಪುರಂ ಸಿಂಹಪುರಮೆಂಬುದು ಪುರಂ. ಅದನಾಳ್ವನತುಳಭುಜಬಳಸಂಚೂರ್ಣಿತಾರಾತಿಪಾಷಾಣಂ ಶ್ರೀಷೇಣನೆಂಬರಸಂ : ಆತಂಗೆ,

(ಮೂ. ಸಂ. ೨-೩೫ ಗ ಪು ೮೭)

ಸೌಂದರಿಯದ ಗಾಡಿಗಳೊಳ
ಗೊಂದೊಂದನೆ ನೆರಪಿ ಮಾಡಿದಂ ಬಿದಿಯೊನೆ ಹ್ನ!
ತ್ಸೌಂದರಿ ಜಿತಾಮರಾಧಿಪ
ಸೌಂದರಿ ಸೌಂದರಿಯೆ ಪೆಸರೊಳಂ ರೂಪಿನೊಳಂ॥

(ಮೂ. ೨-೩೭, ಸಂ. ೨೪ ಗ)

ಒರ್ಮೆಯುಮವಚಱದೊಲವಿನ
ಕೂರ್ಮೆಯ ತತ್ಪತಿಗಮಾಕೆಗಂ ನಿಜವಂಶ।
ಕ್ಕಾರ್ಮವೆನೆ ಪುಟ್ಟಿದರ್ ಜಯ
ವರ್ಮ ಶ್ರೀವರ್ಮರೆಂಬ ರಿರ್ವರ್ ತನಯರ್॥

(ಮೂ.೨-೩೭..ಸಂ. ೨೪ಗ)

ವ॥ ಅವರೊಳ್ ರೆಱೆಯಾತನೆನ್ನೃಪತಿಗಂ ಪರಿವಾರಕ್ಕಯಣುಗನಾಗಿ ಬಳೆಯೆ ಪಲಕಾಲಂ ಶ್ರೀಷೇಣನರಸುಗೆಯ್ದು:

ಎಡೆವೆತ್ತೊರ್ಮೆಯೆ ಮುಪ್ಪು ಕುತ್ತದೊಳೊಡಂಬಟ್ಟೊತ್ತೆ ಮತ್ತಲ್ಲಿ ಮೆ
ಳ್ಪಡದಾರ್ತಣ್ಮಿ ತಪಕ್ಕೆ ಪೋಪ ಪದದೊಳ್ ತನ್ನಗ್ರಪುತ್ರಂ ಕ್ರಮಂ
ಬಿಡದಿರ್ದಂ ಜಯವರ್ಮನಿರ್ದೊಡಮುವಂ ಮುಟ್ಟಲ್ಲ ನೆಂದೊಳ್ಪಡಂ
ಬಡುವನ್ನಂ ಕಿಱೆಯಾತನಂ ನಿಱಿಸಿದಂ ಶ್ರೀವರ್ಮನಂ ರಾಜ್ಯದೊಳ್

(ಮೂ. ೨-೩೮, ಸಂ. ೨೪೧)

ವ॥ ಆ ಜಯವರ್ಮನುಮವಮಾನಪವಮಾನಾವಧೂತನಾಗಿ ಪೋಗಿ.

### ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ

ಎಂದು ಬೆಸಗೊಂಡೊಡೆ. "ಆತನಭವ್ಯನಲ್ಲನ್: ಭವ್ಯನೇ. ಭವ್ಯನಾಗಿಯು ಮಾಸನ್ನ ಭವ್ಯನ್. ಎಂತೆಂದೊಡೆ: ಜಂಬೂದ್ವೀಪದಪರ ವಿದೇಹದೊಳ್ ಗಂಧಿಳಮೆಂಬುದು ವಿಷಯಂ. ಅದನಾಳ್ವಂ ಶ್ರೀಷೇಣನೆಂಬರಸಂ. ಆತಂಗೆ ಹೃತ್ಸೌಂದರಿ ಸೌಂದರಿ: ಜಯವರ್ಮ ಶ್ರೀವರ್ಮರೆಂಬಿರ್ವರ್ ತನಯರ್. ಅವರೊಳ್ ಕಿಱೆಯಾತನೆ ನೃಪತಿಗಂ ಪರಿವಾರಕ್ಕಮಣುಗನಾಗಿ ಬಳಿಯೆ ಶ್ರೀಷೇಣಂ ತಪಕ್ಕೆ ಪೋಪ ಪದದೊಳ್ ಅಗ್ರಪುತ್ರಂ ಜಯವರ್ಮ ನಿರ್ದೊಡಮುವಂ ಮುಟ್ಟಲ್ಲನೆಂದು ಕಿಱೆಯಾತನಂ ಶ್ರೀವರ್ಮನಂ ರಾಜ್ಯದೊಳ್ ನಿಱಿಸಿದಂ. ಆ ಜಯವರ್ಮನು ಮವಮಾನ ಪವಮಾನಾವಧೂತನಾಗಿ ಪೋಗಿ.

(ಸಂ. ೨೪೧)

048716

**ವಿವರಣೆ:** ಈ ಸಂಗ್ರಹಭಾಗದ ಮೂಲ ಪಠ್ಯ ಹೀಗಿದೆ. ಈ ಭಾಗದಲ್ಲಿ ಕಥಾದೃಷ್ಟಿಯಿಂದ ಶ್ರೀಷೇಣ ಸೌಂದರಿಯರ ಮತ್ತು ಅವರ ಮಕ್ಕಳಾದ ಶ್ರೀವರ್ಮ ಜಯವರ್ಮರ ಹೆಸರುಗಳನ್ನಷ್ಟೇ ತೆಗೆದುಕೊಂಡಿದ್ದಾರೆ. ಗದ್ಯಭಾಗದಲ್ಲಿ ಸಿಂಹಪುರಪಟ್ಟಣವನ್ನು ಶ್ರೀಷೇಣ ಆಳುತ್ತಿದ್ದನು ಎಂಬಂಶ ಬಿಟ್ಟಿದೆ. ಸಂಗ್ರಹದಲ್ಲಿ (ಎಲ್.ಗುಂ) ಗಂಧಿಳವೆಂಬ ದೇಶವನ್ನೇ ಶ್ರೀಷೇಣ ಆಳುತ್ತಿದ್ದ ಎಂಬ ತಪ್ಪು ಕಲ್ಪನೆ ಮೂಡುತ್ತದೆ. ಆದ ಕಾರಣ ಗಂಧಿಳವೆಂಬುದು ವಿಷಯಂ ಆ ವಿಷಯ ವಿಳಾಸಿನಿಗೆ (ಸಿಂಹಪುರವೆಂಬುದು ಪುರಂ. ಅದನಾಳ್ವ .............. ಎಂದು ಸಂಗ್ರಹಿಸಬೇಕಿತ್ತು)

### VII. ಸಂಗ್ರಹಿಸಿದ ಗದ್ಯಭಾಗ ಮತ್ತು ಸಂಗ್ರಹಿಸಿದ ಪದ್ಯಭಾಗಗಳ ಸೇರ್ಪಡೆ ಮಾಡಿದ ಗದ್ಯಭಾಗಗಳು.

ಒಂದು ಆಶ್ವಾಸದ ಕೊನೆಯ ಭಾಗ ಗದ್ಯ. ಪದ್ಯ ಭಾಗಗಳು ಮತ್ತೊಂದು ಆಶ್ವಾಸದ ಪ್ರಾರಂಭದ ಪದ್ಯ ಗದ್ಯ ಭಾಗಗಳನ್ನು ಸಂಗ್ರಹಿಸಿ ಒಂದೇ ಗದ್ಯ ಭಾಗ ಸಂಗ್ರಹ ಮಾಡಿ ಅದಕ್ಕೆ ತಮ್ಮದೇ ಆದಿ ಪ್ರತ್ಯೇಕ ಶೀರ್ಷಿಕೆಯನ್ನು ಕೊಟ್ಟಿರುವುದು ಮತ್ತೊಂದು ವಿಧಾನ. ಉದಾಹರಣೆಗೆ ಈ ಕೆಳಗೆ ನೀಡಲಾಗಿರುವುದು ಪಂಚಮಾಶ್ವಾಸಂನ ಕೊನೆಯ ಪದ್ಯ-ಗದ್ಯಭಾಗಗಳು.

ದಿವಿಜವನಿತಾಸವಿಭ್ರಮ
ಧವಳಾಪಾಂಗಮೆ ನಿಜಾಯುರಂಭೋನಿಧಿಯಂ
ತವೆ ಪೀರ್ದುದೆನಿಸೆ ತೊಟ್ಟನೆ
ದಿವದಿಂದಂ ಶ್ರೀಧರಂ ಪರಿಚ್ಯುತನಾದಂ

(ಮೂ. ೫-೯೯, ಸಂ. ೮೩-೨೧)

ವ॥ ಆಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿಮಹೀಪಾಳಂಗಂ ಸುಂದರನಂದಾಮಹಾದೇವಿಗಂ

ತವೆ ನೋಡಲ್ ನೋಡಿ ಮೆಚ್ಚಲ್ ಮನಸದೊಳಸದಳಂ ಮೆಚ್ಚಿ ನಾನಾವಿಶೇಷ
ಸ್ತವದಿಂದಂ ಕೀರ್ತಿಸಲ್ಕತ್ತಳಗಮಮರನಾಥಂಗಮೆಂಬನ್ನೆಗಂ ರೂ
ಪವಿಳಾಸಶ್ರೀಯೊಳಾ ಶ್ರೀಧರನಧಿಕಯಶಶ್ಶ್ರೀಧರಂ ಪುತ್ರನಾದಂ
ಸುವಿಧಿಶ್ರೀನಾಮದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ॥

(ಆದಿ ಮೂ-೫-೧೦೦, ಸಂ.-೮೩-೨೧)

ಪ್ರಿಯಪುಷ್ಪಸ್ತಬಕಂಗಳಿಂ ತುಱುಗಿದೊಂದಿಮ್ಮಾವನತ್ಯಂತಕಾಂ
ತಿಯೊಳಾಶಾಂತರಮೆಲ್ಲಮಂ ತೊಳಪ ಸಂಪೂರ್ಣೇಂದುವಂ ತನ್ನ ಶೋ
ಭಯ ತನ್ನುಜ್ಜ್ವಳಕಾಂತಿಯೊಂದು ವಿಭವಂ ಗಲ್ವನ್ನೆಗಂ ಯೌವನೋ
ದಯದೊಳ್ ನೋಡಿದರಂ ಮನಂಗೊಳಿಸಿದಂ ಸಂಸಾರಸಾರೋದಯಂ

(ಮೂ.೫-೧೦೧, ಸಂ. ೮೩-೨೧)

**ಷಷ್ಠಾಶ್ವಾಸಂ**

ಶ್ರೀಯುಂ ಸೋಗಯಿಪ ವಚ
ಶ್ರೀಯುಂ ತನ್ನೇೞ್ಗೆಯೊಳ್ ಪೊದೞ್ದಿಸೆಯೆಯುಮಾ।
ಶ್ರೀಯುಮನೇಂ ಸುಭಗವಯ
ಶ್ರೀಯುಮನಾಂತನೊ ಸರಸ್ವತೀಮಣಿಹಾರಂ॥

(ಮೂ.೬-೧, ಸಂ.೮೩-೨.೧)

ನೆಗೞ್ದಿಭಯಘೋಷಚಕ್ರಿಯ
ಮಗಳ ಮನೋರಮೆಯ ಮದುವೆಗಂ ರಾಜ್ಯದ ಪ
ಟ್ಟುಗೆಗಂ ಗುರೂಪರೋಧ
ಕ್ಕಗಿದು ಮನಂದಂದನೇಂ ಜತಾತ್ಮನೊ ಪುರುಷಂ

(ಮೂ ೬-೨. ಸಂ. ೮೩-೨.೧)

ವ॥ ಅಂತಗಣ್ಯಪುಣ್ಯನಿಧಿಯೆನಿಸಿದ ಸುವಿಧಿಗಮಾತನ ಮನೋರಮೆ ಮನೋರಮೆಗಂ ಶ್ರೀಮತೀಚರನೆನಿಸಿದಾ ಸ್ವಯಂಪ್ರಭದೇವಂ ದೇವಲೋಕದಿಂದವತರಿಸಿ.

ಪ್ರಿಯವನಿತಾಚಾರನೆ ಗಡಂ
ಪ್ರಿಯತನಯಂ ಕೇಶವಾಲಂಕನಾದನಿದೇಂ ವಿ
ಸ್ಮಯ ಕರಮೊ ಸಂಸೃತಿಸ್ಥಿತಿ
ಬಯಸುವುದೆಂತಯ್ಯ ಪೇೞ್ ಮಿಂತಪ್ಪುದುಮಂ

(ಮೂ. ೬-೩, ಸಂ. ೮೬/೨ ಗ)

ವ॥ ಮತ್ತಮಾವಿಷಯದೊಳ್ ಶಾರ್ದೂಲಚರನಪ್ಪ ಚಿತ್ರಾಂಗದದೇವಂ ದೇವಲೋಕದಿಂದ-ವತರಿಸಿ ಬಂದು ಸಮಾನಪುಣ್ಯತ್ವಂ ಕಾರಣಮಾಗಿ ಸುವಿಧಿಸಮಾನನಪ್ಪ ಮಂಡಳಿಕಂ ವಿಭೀಷಣಂಗಂ ಪ್ರಿಯದತ್ತೆಯೆಂಬ ತತ್ಪ್ರಿಯಲಲನೆಗಂ ವರದತ್ತನೆಂಬೊಂ ಮಗನಾದೊಂ; ವರಾಹಾರ್ಯಚರನಪ್ಪ ಮಣಿಕುಂಡಲದಿವಿಜಂ ನಂದಿಷೇಣಂಗಮನಂತಮತಿಗಂ ವರಸೇನನೆಂಬೊಂ ತನಯನಾದಂ: ವಾನರಾರ್ಯಚರನಪ್ಪ ಮನೋಹರಾಮರಂ ರತಿಷೇಣಗಂ ಚಂದ್ರಮತಿಗಂ ಚಿತ್ರಾಂಗದನೆಂಬೊಂ ತನಯನಾದಂ: ನಕುಳಾರ್ಯಚರನಪ್ಪ ಮನೋರಥಕಲ್ಪಜಂ ಪ್ರಭಂಜನಂಗಂ ಚಿತ್ರಮಾಲೆಗಂ ಶಾಂತಮದನನೆಂಬ ಪುತ್ರನಾಗಿ

ಪೂರ್ವಭವಸ್ನೇಹಮದೋ
ರೊರ್ವರನಲೆದೊಂದು ಮಾಡೆ ತಮ್ಮನಿಬರುಮಂ
ದೊರ್ವಳಿ ನೆರೆದತಿಲಲಿತತ
ರೋರ್ವೀತಳಸುಖಮನುಣುತುಮಿರೆ ಪಲಕಾಲಂ

(ಮೂ. ೬-೪, ಸಂ. ೮೬/೨ ಗ)

**ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ**

**ಸುವಿಧಿ**

ಶ್ರೀಧರಂ ದಿವದಿಂ ಪರಿಚ್ಯುತನಾಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀ ವಿಷಯದ ಸುಸೀಮಾ ನರಗಮನಾಳ್ವ ಸುದೃಷ್ಟಿ ಮಹೀಪಾಳಂಗಂ ಸುನಂದಾ ಮಾಹಾದೇವಿಗಂ ಸುವಿಧಿನಾಮದಿಂಪುತ್ರನಾದಂ. ಜಿತಾತ್ಮಂ ಪುರುಷಂ ಗುರೂಪರೋಧಕ್ಕಗಿದು ಅಭಯಘೋಷ ಚಕ್ರಿಯ ಮಗಳ ಮನೋರಮೆಯ ಮದುವೆಗಂ ರಾಜ್ಯದ ಪತ್ತುಗೆಗಂ ಮನಂದಂದಂ. ಸುವಿಧಿಗಂ ಮನೋರಮೆಗಂ ಶ್ರೀಮತೀ ಚರನೆನಿಸಿದಾ ಸ್ವಯಂಪ್ರಭದೇವಂ ದೇವಲೋಕದಿಂದವತರಿಸಿ ಕೇಶವಾಂಕಂ ಪ್ರಿಯತನಯನಾದಂ. ಆಗಿ. ಪೂರ್ವಭವ ಸ್ನೇಹಂ ತಮ್ಮನೊಂದು ಮಾಡೆ ಪಲಕಾಲ ಮುರ್ವೀತಳ ಸುಖಮನುಣುತುಮಿರೆ.

(ಮೂ.೫-೯೬ ರಿಂದ ೬-೪, ಸಂ. ೮೨/೨ ಗ)

**ವಿವರಣೆ:** ಮೇಲ್ಕಂಡ ಗದ್ಯಭಾಗ ಸಂಗ್ರಹದಲ್ಲಿ ಶ್ರೀಧರನು ಪರಿಚ್ಯುತನಾಗಿ ಸುವಿಧಿಯಾಗಿ ಜನ್ಮತಾಳಿ. ಶ್ರೀಮತಿಯು ಮನೋರಮೆಯಾಗಿ ಜನ್ಮತಾಳಿದಳು. ಇವರಿಬ್ಬರು ಹೊಸ ಜನ್ಮತಾಳಿ ಒಂದಾದರು ಎಂಬುದಷ್ಟೇ ಇಲ್ಲಿ ಮುಖ್ಯವಾಗಿರುವುದರಿಂದ ಸುವಿಧಿಯ ರೂಪಲಾವಣ್ಯದ ಭಾಗ ಮತ್ತು ಇವರಿಬ್ಬರ ಜನ್ಮಾಂತರದ ಕಥೆಗಳನ್ನು ಬಿಟ್ಟಿದ್ದಾರೆ. ಆದರೂ ಮುಖ್ಯ ಕಥಾಭಾಗಕ್ಕೆ ಧಕ್ಕೆ ಬಂದಿಲ್ಲ.

ಆದರೆ ಮೇಲ್ಕಂಡ ಗದ್ಯಭಾಗ ಸಂಗ್ರಹದ ವೈಶಿಷ್ಟ್ಯವೇನೆಂದರೆ ಮೂಲದಲ್ಲಿ ಪದ್ಯ ೫-೯೯ ರಿಂದ ೬-೪ರ ವರೆಗೂ ಇದೆ. ಅಂದರೆ ಪಂಚಮಾಶ್ವಾಸಂ ನ ಕೊನೆಯ ಪದ್ಯ, ಗದ್ಯ ಭಾಗಗಳು ಮತ್ತು ಷಷ್ಠಾಶ್ವಾಸಂನ ಪ್ರಾರಂಭದ ೬-೨, ೬-೩, ೬-೪ರ ಗದ್ಯ, ಪದ್ಯ ಭಾಗಗಳು ಬಂದಿವೆ.

ಗುಂಡಪ್ಪನವರು ಈ ಎರಡೂ ಆಶ್ವಾಸಗಳನ್ನು ಬಳಸಿ ಒಂದೇ ಗದ್ಯ ಭಾಗ ಸಂಗ್ರಹ ಮಾಡುವುದರ ಜೊತೆಗೆ ಈ ಗದ್ಯಭಾಗಕ್ಕೆ ಕಥಾದೃಷ್ಟಿಯಿಂದ ಬೇರೆ ಉಪಶೀರ್ಷಿಕೆಯನ್ನು ಕೊಟ್ಟಿರುವುದು ವಿಶೇಷವಾಗಿದೆ. ಇದೇ ರೀತಿಯ ಸಂಗ್ರಹ ವಿಧಾನವನ್ನು (೩-೯೧ ರಿಂದ ೪-೫ರ ಗದ್ಯ ಭಾಗದಲ್ಲೂ ನೋಡಬಹುದು.)

**VIII. ಶೀರ್ಷಿಕೆಗಳ ನೀಡಿಕೆ**

ಮೂಲಗ್ರಂಥದಲ್ಲಿ ಆಶ್ವಾಸಾನುಸಾರ ಕೃತಿರಚನೆಯನ್ನು ಕಾಣುತ್ತೇವೆ. ಅದೇ ರೀತಿ ವೆಂಕಟಾಚಲಶಾಸ್ತ್ರಿಗಳು. ಕೂಡಾ ಹಾಗೆಯೇ ಮಾಡಿದ್ದಾರೆ. ಆದರೆ ಎಲ್. ಗುಂಡಪ್ಪನವರು ಆದಿಪುರಾಣ ಸಂಗ್ರಹದಲ್ಲಿ ಕಥಾ ಸರಣಿಗೆ ಅನುಗುಣವಾಗಿ ಪ್ರಧಾನ ಶೀರ್ಷಿಕೆಗಳನ್ನು ಮತ್ತು ಪ್ರಧಾನ ಶೀರ್ಷಿಕೆಗಳ ಒಳಗೆ ಉಪಶೀರ್ಷಿಕೆಗಳನ್ನು ಕೊಟ್ಟಿದ್ದಾರೆ. ಇವುಗಳಿಗೆ ಅನುಗುಣವಾಗಿ ಗದ್ಯ ಪದ್ಯಗಳನ್ನು ಸಂಗ್ರಹಿಸಿ ಪ್ರತ್ಯೇಕಿಸಿದ್ದಾರೆ. ಇಲ್ಲಿ ಅವುಗಳನ್ನು ನೋಡಬಹುದು.

| **ಪ್ರಧಾನ ಶೀರ್ಷಿಕೆಗಳು** | **ಉಪಶೀರ್ಷಿಕೆಗಳು** |
|---|---|
| ೧. ಪೀಠಿಕೆ | – ಇಲ್ಲ |
| ೨. ಮಹಾಬಲಂ | ಸ್ವಯಂ ಬುದ್ಧ್ಯೋಪದೇಶಂ– ಚಾರಣಾದೇಶಂ<br>ಜಯವರ್ಮಜನ್ಮಾಖ್ಯಾನಂ– ಪ್ರಾಯೋಪಗಮನಂ |
| ೩. ಲಲಿತಾಂಗಂ | ದೇವಲೋಕ ಸುಖಾನುಭವಂ – ಸ್ವಯಂಪ್ರಭಾನುರಾಗಂ – ದೇವಲೋಕ ಚ್ಯುತಿ |
| ೪. ವಜ್ರಜಂಘಂ | ಶ್ರೀಮತಿ ಪೂರ್ವಜನ್ಮ ಕಥಾವಳಿ – ಚಿತ್ರಪಟವ್ಯತಿಹಾರಂ – ಶ್ರೀಮತಿ ವಜ್ರಜಂಘ ವಿವಾಹಂ – ಚಾರಣದರ್ಶನಂ – ಮತಿವರಾದಿಗಳ ಭವಾವಳಿ – ಶ್ರೀಮತಿ ವಜ್ರಜಂಘ ಸಹಮರಣಂ. |
| ೫. ಭೋಗ ಭೂಮಿಜಂ | ಪ್ರೀತಿಂತರ ದರ್ಶನಂ – ಸಮ್ಯಕ್ತ್ವೋಪದೇಶಂ |
| ೬. ಶ್ರೀಧರ ದೇವಂ | ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿ – ಶ್ರೀಧರದೇವನ ಧರ್ಮ ಸಂವೇಗಂ: ಶತಮತಿ ಪ್ರತಿಬೋಧನಂ |

| | |
|---|---|
| ೭. ಸುವಿಧಿ | ಧರ್ಮಾಮೃತಾಸ್ವಾದನಂ – ಅಣುಗ್ರತಗ್ರಹಣಂ : ಸಮಾಧಿ ಮರಣಂ. |
| ೮. ಅಚ್ಯುತೇಂದ್ರ | –ಇಲ್ಲ– |
| ೯. ವಜ್ರನಾಭಿ ಚಕ್ರವತಿಕತ್ವಂ | ಸಂಸೃತಿ ಭೋಗನಿಸ್ಪೃಹತೆ – ಮಹಾವ್ರತ ಗ್ರಹಣಂ – ಮಹಾತಪೋನುಷ್ಠಾನಂ – ಸಮಾಧಿಮರಣಂ |
| ೧೦. ಸಮಥ್ಯಸಿಧಿಯೊಳಪವಿಂದ್ರಂ | – ಇಲ್ಲ– |
| ೧೧. ನಾಭಿರಾಜವಿಭವಂ | – ಇಲ್ಲ – |
| ೧೨. ಗರ್ಭಾವತರಣಂ | – ಇಲ್ಲ – |
| ೧೩. ಜನ್ಮಾಭಿಷೇಕೋತ್ಸವಂ | – ಇಲ್ಲ – |
| ೧೪. ವೃಷಭೇಶ್ವರ ವಿವಾಹಂ: ಕುಮಾರೋದಯಂ | |
| ೧೫. ವಿದ್ಯೋಪದೇಶಂ | – ಇಲ್ಲ – |
| ೧೬. ಕೃತಯುಗಾರಂಭಂ | – ಇಲ್ಲ – |
| ೧೭. ಆದಿಬ್ರಹ್ಮರಾಜ್ಯಾಭಿಷೇಕಂ | – ಇಲ್ಲ – |
| ೧೮. ಪರಿನಿಷ್ಕ್ರಮಣಕಲ್ಯಾಣಂ | ಸುರರಾಜಸೇವೆ – ನೀಳಾಂಜನಾನೃತ್ಯಂ – ಸಂಸಾರ ಸ್ವರೂಪ ಚಿಂತನಂ – ವೈರಾಗೋದ್ಯಯಂ – ಪರಾನಿಷ್ಕ್ರಮಣಂ |
| ೧೯. ಆದಿತೀರ್ಥ ಕರ್ತಾರತಪಃ ಪ್ರಭಾವಂ | – ಇಲ್ಲ – |
| ೨೦. ಯೋಗವ್ಯಾಘಾತಂ : ವ್ಯಾಘ್ಯಾತ ಪರಿಹಾರಂ | – ಇಲ್ಲ – |
| ೨೧. ಚಯಾಗಪರ್ಯಟನಂ ಅಕ್ಷಯದಾನಂ | ಅಕ್ಷಯ ದಾನಂ |
| ೨೨. ಕೈವಲ್ಯ ಬೋಧೋದಯಮಹಿಮೆ | – ಇಲ್ಲ – |
| ೨೩. ಭರತನ ಅರ್ಹತ್ಪದಾರ್ಚನಂ | – ಇಲ್ಲ – |
| ೨೪. ತತ್ತ್ವೋಪದೇಶಂ | – ಇಲ್ಲ – |
| ೨೫. ಧರ್ಮಚಕ್ರಪ್ರವರ್ತನಂ | – ಇಲ್ಲ – |
| ೨೬. ಚಕ್ರಪೂಜೆ: ವಿಜಯಪ್ರಸ್ತಾನಂ | ಮಾಗಧ ದರ್ಪ ದಳನಂ |

| | |
|---|---|
| ೨೭. ದಕ್ಷಿಣಪಶ್ಚಿಮದಿಗ್ವಿಜಯಂ | ವರತನು ಪ್ರಭಾಸಾಮರ ಜಯಂ – ವಿಜಯಾರ್ಧ ಪರ್ವತಾಗಮನಂ – ಮ್ಲೇಚ್ಛಖಂಡ ವಿಜಯಂ |
| ೨೮. ಉತ್ತರಭರತ ವಿಜಯೋದ್ಯೋಗಂ | ಮೇಘಮುಖ ಪರಾಭವಂ |
| ೨೯. ವೃಷಬಾದ್ರಿ ಗಮನಂ ಭರತ ವಿಜಯ ಪ್ರಶಸ್ತಿ | ಭರತ ವಿಜಯ ಪ್ರಶಸ್ತಿ |
| ೩೦. ವಿದ್ಯಾಧರ ಬಾಂಧವ್ಯಂ ; ಪೂರ್ವಮ್ಲೇಚ್ಛಖಂಡವಿಜಯಂ | – ಇಲ್ಲ – |
| ೩೧. ಕೈಲಾಸಗಮನಂ; ವೃಷಭನಾಥ ಸ್ತುತಿ | ವೃಷಭನಾಥಸ್ತುತಿ |
| ೩೨. ಚಕ್ರಗತಿ ಸ್ಖಲನಂ | ಪುರೋಹಿತವಚನಂ – ದೂತಪ್ರೇಷಣಂ |
| ೩೩. ಭರತ ಬಾಹುಬಲಿ ಯುದ್ಧಂ | ಬಾಹುಬಲಿ ಕುಮಾರಂಗೆ ಲೇಖನಂ ಬಾಹುಬಲಿಯ ದರ್ಪೋಕ್ತಿ – ಭರತ ಬಾಹುಬಲಿ ಯುದ್ಧಂ – ಚಕ್ರವರ್ತಿ ಪರಾಭವಂ |
| ೩೪. ಬಾಹುಬಲಿಯ ವೈರಾಗ್ಯಂ | ದೀಕ್ಷಾಗ್ರಹಣಂ – ಕೇವಲ ಜ್ಞಾನೋದಯಂ – ಚಕ್ರಾಭಿಷೇಕೋತ್ಸವಂ – ಭಾರತ ರಾಜ್ಯಭಾರಂ – ವಿಪ್ರಸಂತತಿ ನಿರ್ಮಾಣಂ |
| ೩೫. ಸ್ವಪ್ನ ದರ್ಶನಂ | ಭಗವದರ್ಹದ್ವಚನಂ – ಪ್ರಿಯ ಧರ್ಮ ನೃಪತಿ |
| ೩೬. ಆದಿತೀರ್ಥಂಕರ ಪರಿನಿರ್ವಾಣಂ | ಪರಿನಿರ್ವಾಣ ಕಲ್ಯಾಣಂ – ಭರತ ಶೋಕಾವೇಗಂ |
| ೩೭. ಉಪಸಂಹಾರಂ. | |

**ಪ್ರತ್ಯೇಕ ಶೀರ್ಷಿಕೆ ನೀಡಿಕೆಗೆ ಉದಾಹರಣೆ**

ಎಲ್. ಗುಂಡಪ್ಪನವರು ಗದ್ಯ ಮತ್ತು ಪದ್ಯಗಳನ್ನು ಸಂಗ್ರಹ ಮಾಡುವುದರ ಜೊತೆಗೆ ಕಥಾದೃಷ್ಟಿಯಿಂದ ಮೂಲದಲ್ಲಿ ಒಂದೇ ಗದ್ಯಭಾಗವಿದ್ದರೆ ಇವರು ಆ ಗದ್ಯ ಭಾಗಕ್ಕೆ ಪ್ರತ್ಯೇಕ ಶೀರ್ಷಿಕೆಯನ್ನು ನೀಡಿ ಸಂಗ್ರಹ ಮಾಡಿದ್ದಾರೆ.

**ಉದಾ:**

ವ॥ ಅಂತು ವಜ್ರದಂತಚಕ್ರವರ್ತಿ ಲಬ್ಧಾವಧಿಲೋಚನಂ ತ್ರೈಲೋಕ್ಯಲೋಚನಂಗೆ ಸಾಷ್ಟಾಂಗ-
ಪ್ರಣತನಾಗಿ ಮುಗುಟ್ದಿ ಬಂದು ಚಕ್ರಪೂಜೆಯಂ ನಿರ್ವರ್ತಿಸಿ ಪರಾಕ್ರಮಾಕಾಂತಾರಾತಿ
ಚಕ್ರನುಂ ಸಾಧಿತದಿಕ್ಚಕ್ರನುಮಾಗಲ್ಬಗೆದು ಗಜತುರಗರಥಪದಾತಿದಿವಿಜವಿದ್ಯಾಧರ-
ಬಲಂಬೆರಸು ದಿಗ್ಜಯೋದ್ಯೋಗದಿಂ ಪೋದಂ ಅನ್ನೆಗಮಿತ್ತ ಪಂಡಿತೆಯುಮತಿ-
ಶೋಕಾಕ್ರಾಂತಮತಿಯುಂ ಶ್ರೀಮತಿಯನೊರ್ಬಳನೆ ಕನ್ನೆಮಾಡದ ಪೆಱಗಣ
ನಂದನವನಕ್ಕುಯ್ದುದಱೊಳಗೆ.

ತೋಳ ನೀಳದ ಕೆಂದರಿಂದ ಸಂದಣಿಸಿರ್ದ ಮದಾಳಿಯಂ
ದೋಳದಿಂ ಮಳಯಾನಿಲಲೀಲಾಂದೋಳದಿನೊಪ್ಪೆ ಮನೋಭವಂ
ಗಾಳುಮಿಪವೊಲಿರ್ದತಿರಕ್ತಾಶೋಕದ ಸುತ್ತಿನೊಳಿರ್ದ ರೂ
ಕ್ಷಾಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಸಿ ಕನ್ನೆಯಂ

(ಮೂ. ೩-೩೦, ಸಂ.. ೫೩(೨) ಗ)

ನುಡಿದಳ್ ನೀನೆನಗಿಂತು ನಿನ್ನ ಬಗೆಯಂ ಕಾದಕ್ಕ ಪೇಱರೊಳಂ
ನುಡಿವೋ ಬೇಸಱನೆಯ್ದೆ ಕೂರ್ಪವರನೇನೆನ್ನಿಂದಮಿನ್ನಗ್ಗಳಂ
ಪಡೆವೋ ಮೌನದೊಳಿಂತು ನೀನಿರೆ ರುವದ್ಭಂಗಾಳಿಯು ಪತ್ತುವಿ
ಟ್ಟುಡುಗಿರ್ದಬ್ಜಮನೆಯ್ದೆ ಪೋಲ್ದುದು ಭವದ್ವಕ್ತ್ರಾಬ್ಜನಬ್ಜಾನನೇ

(ಮೂ ೩-೩೧, ಸಂ ೫೩(೨) ಗ)

**ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ**

ಮುಗುಱ್ದಿ ಬಂದು ಚಕ್ರ ಪೂಜೆಯಂ ನಿರ್ವರ್ತಿಸಿ ಬಲಂಬೆರಸು ದಿಗ್ಜಯೋದ್ಯೋಗದಿಂ ಪೋದಂ

(ಸಂ. ೫೩(೧)ಗ)

**ಶ್ರೀಮತಿ ಪೂರ್ವಜನ್ಮ ಕಥಾವಳಿ**

ಇತ್ತ ಪಂಡಿತೆಯುಂ ಶ್ರೀಮತಿಯುಂ ಶ್ರೀಮತಿಯನೊರ್ಬಳನೆ ಕನ್ನೆಮಾಡದ ಪೆಱಗಣ ನಂದನವನಕ್ಕುಯ್ದು ಅಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಸಿ ನುಡಿದಳ್:

(ಸಂ. ೫೩(೨)ಗ)

**ವಿವರಣೆ :** ಮೇಲ್ಕಂಡ ಗದ್ಯ ಭಾಗಸಂಗ್ರಹದಲ್ಲಿ ಆದಿಪುರಾಣದ ಮೂಲಪಠ್ಯ ಭಾಗದ ೩-೨೯ರ ಗದ್ಯ ಭಾಗದಿಂದ ೩-೩೧ ಪದ್ಯಭಾಗದ ವರೆಗೆ ಸಂಕ್ಷಿಪ್ತಗೊಳಿಸಿ ಎಂದರೆ ಮುಖ್ಯ ಪದಪುಂಜಗಳನ್ನು ಆರಿಸಿ ಹೊಂದಿಸಿ ಗದ್ಯಭಾಗ ಮಾಡಿದ್ದಾರೆ.

ಪ್ರತ್ಯೇಕ ಶೀರ್ಷಿಕೆ ನೀಡುವ ಹಿನ್ನೆಲೆಯಲ್ಲಿ ೩-೨೯ರ ಗದ್ಯಭಾಗದಿಂದ ಕೇವಲ ೨ ಸಾಲುಗಳನ್ನು ............... ಮಿಗುಱ್ದಿ ............. ಪೋದಂ ಎಂಬಷ್ಟೇ ಪದಗಳನ್ನು ಆಯ್ದು ಎಲ್. ಗುಂಡಪ್ಪನವರ ಸಂಗ್ರಹಿತ ಭಾಗದಲ್ಲಿ ಇದನ್ನು ೫೩(೧)ರ ಗದ್ಯ ಭಾಗಕ್ಕೆ ಅಳವಡಿಸಿದ್ದಾರೆ. ಇದೇ ರೀತಿ ಇದೇ ಗದ್ಯ (೩-೨೯) ಭಾಗದ ಮತ್ತೆರಡು ಸಾಲುಗಳಾದ ಇತ್ತ ಪಂಡಿತೆಯುಂ ..... ನಂದನ ವನಕ್ಕುಯ್ಯದವೊಳಗೆ, ಮತ್ತು ೩-೩೦, ೩-೩೧ರ ಪದ್ಯ ಭಾಗಗಳಲ್ಲಿ ಕೆಲವಷ್ಟೇ ಪದಗಳನ್ನು ಆಯ್ದು ೫೩(೨)ರ ಗದ್ಯ ಭಾಗಕ್ಕೆ ಅಳವಡಿಸಿದ್ದಾರೆ. ಇದಕ್ಕೆ ಶ್ರೀಮತಿ ಪೂರ್ವಜನ್ಮ ಕಥಾವಳಿ ಎಂಬ ಪ್ರತ್ಯೇಕ ಶೀರ್ಷಿಕೆಯನ್ನು ನೀಡಿರುವುದು ಕುತೂಹಲಕಾರಿಯಾಗಿದೆ.

## IX. ಪಂಚಕಲ್ಯಾಣಗಳ ಸಂಗ್ರಹ ವಿಧಾನ

ಮೂಲಪುರಾಣಗಳಲ್ಲಿ ಪಂಚಕಲ್ಯಾಣಗಳ ವರ್ಣನಾಭಾಗಗಳನ್ನು ಸಾಂಗೋಪಾಂಗವಾಗಿ ಸಂಗ್ರಹ ಮಾಡಲಾಗಿದೆ. ಆದರೆ ಗುಂಡಪ್ಪನವರು ಕೆಲವು ರಸವತ್ತಾದ ವರ್ಣನಾ ಭಾಗಗಳನ್ನು ಬಿಟ್ಟಿದ್ದಾರೆ. ಪಂಪನ ಕಾವ್ಯಶಕ್ತಿ ಅಡಕವಾಗಿರುವುದು ಈ ಭಾಗಗಳಲ್ಲೇ. ಆದ್ದರಿಂದ ಪಂಪನ ಕಾವ್ಯದ ದೃಷ್ಟಿಯಿಂದ ಇಂತಹ ಭಾಗಗಳನ್ನು ಬಿಟ್ಟಿರುವುದು ಸಮಂಜಸವೆಂದು ತೋರುವುದಿಲ್ಲ. ಇಂತಹ ಕೆಲವು ಉದಾಹರಣೆಗಳನ್ನು ಈ ಕೆಳಗೆ ನೋಡಬಹುದಾಗಿದೆ.

೧. ಗರ್ಭಾವತರಣ ಕಲ್ಯಾಣ (ನೋಡಿ: ಟಿಪ್ಪಣಿ)[20] ಗರ್ಭಾವತರಣದ ವರ್ಣನೆ ಭಾಗಗಳು ಬಹಳ ದೀರ್ಘವಾಗಿರುವುದರಿಂದ ಅದನ್ನು ಇಲ್ಲಿ ಉಲ್ಲೇಖಿಸಿಲ್ಲ. ಕೇವಲ ವಿವರಣೆಯನ್ನಷ್ಟೇ ನೀಡಲಾಗಿದೆ.

ಈ ಭಾಗದಲ್ಲಿ ಎಲ್. ಗುಂಡಪ್ಪನವರು ಮರುದೇವಿಗೆ ೬ ತಿಂಗಳಿರುವಂತೆಯೇ ಕುಬೇರನಿಂದ ಚಿನ್ನದ ಮಳೆಯನ್ನು ಸುರಿಸುವ ಭಾಗವನ್ನಷ್ಟೇ ಹೇಳಿ ಮುಂಬರುವ ದೀರ್ಘ ವರ್ಣನಾ ಭಾಗಗಳನ್ನು ಬಿಟ್ಟಿದ್ದಾರೆ. ಈ ಭಾಗಗಳಲ್ಲಿ ದೇವೇಂದ್ರನು ಜನನ ತಾಯಿಯನ್ನು ಸಿಂಗರಿಸಲು, ಮಣಿದರ್ಪಣವನ್ನು ಹಿಡಿಯಲು, ಕೊಡೆಗಳನ್ನು ಹಿಡಿಯಲು, ಚಾಮರವನ್ನು ಬೀಸಲು, ಮಣಿಪ್ರದೀಪಗಳನ್ನು ಬೆಳಗಿಸಲು, ಆಜ್ಞಾಪಿಸುತ್ತಾನೆ.

ಅದರಂತೆ ಕಾರ್ಯವನ್ನು ಮಾಡಲು ಮರುದೇವಿಯು ಹೇಗೆ ಕಂಗೊಳಿಸುತ್ತಾಳೆ ಎನ್ನುವ ದೀರ್ಘ ಪದ್ಯಗಳನ್ನು ಬಿಟ್ಟಿದ್ದಾರೆ. ಅದರಲ್ಲಿ ಕೆಲವೊಂದು ಪದ್ಯಗಳು ಸೊಗಸಾಗಿ ಮೂಡಿಬಂದಿವೆ. ಅವುಗಳಲ್ಲಿ ಕೆಲವನ್ನಷ್ಟೇ ಆಯ್ದು ಇಲ್ಲಿ ಉದಾಹರಿಸಲಾಗಿದೆ.

ಈಕೆಯ ಮುಖೇಂದುಬಿಂಬದಿ
ನೀ ಕನಕಸರೋಜಮೆಂತುಮಲರ್ದತ್ತೆಂದೀ
ಲೋಕಂ ಪೊಗೞ್ವುದು ಕನಕಾ
ಬ್ಜಾಕಾರದ ಡವಕೆವಿಡಿದ ಸುರಸೌಂದರಿಯಂ

(ಮೂ.೭-೭)

ಚಿನ್ನನೆ ಕುರುಳ ನೆವಿಲ್ಗಳ್
ತನ್ನೊಳೆ ತಳ್ವೊಯ್ದು ನೆಗಲ್ದ ಕಟಿ್ಯನೆ ಪೋಲ್ತಂ
ನುನ್ನಂ ಸೊಗಯಿಸುತಿರೆ ಸಿರಿ
ಗನ್ನಡಿ ಕನ್ನಡಿಪ್ರದಾದುದಿಂದುಶ್ರೀಯಂ

(ಮೂ.೭-೧೦)

[20] ಟಿಪ್ಪಣಿ: ಗರ್ಭಾವತರಣದ ವರ್ಣನಾಭಾಗಗಳು ಬಹಳ ದೀರ್ಘವಾಗಿರುವುದರಿಂದ ಅದನ್ನು ಇಲ್ಲಿ ಉಲ್ಲೇಖಿಸಿಲ್ಲ. ಕೇವಲ ವಿವರಣೆಯನ್ನಷ್ಟೇ ನೀಡಲಾಗಿದೆ.

**ವಿವರಣೆ:** ಈ ಪದ್ಯ ಭಾಗಗಳನ್ನು ಸೇರಿಸಬೇಕಾಗಿತ್ತು. ಹಾಗೆಯೇ ಸುರಮಹತ್ತರಿಕೆಯರು ಅಮರಗಣಿಕೆಯರ ಒಬ್ಬೊಬ್ಬರ ಹೆಸರನ್ನು ಕರೆದು ನಿಯೋಜಿಸುವ ಭಾಗಗಳು ಮಹತ್ವಪೂರ್ಣವಾಗಿವೆ. ಇಂತಹ ಭಾಗಗಳನ್ನು ಸಂಗ್ರಹದಲ್ಲಿ ಬಿಟ್ಟಿರುವುದು ಸೂಕ್ತವಲ್ಲ.

**X. ಕನಸುಗಳ ವರ್ಣನೆ ಮತ್ತು ಪದ್ಯ ಭಾಗಗಳ ಸಂಗ್ರಹ**

ಪದ್ಯ ಭಾಗಗಳಲ್ಲಿ ಕೆಲವು ಪದ್ಯದ ಸಾಲುಗಳನ್ನು ಆಯ್ದು ಪದ್ಯಭಾಗ ಸಂಗ್ರಹ ಮಾಡಿರುವುದು ಒಂದು ವಿಶೇಷತೆ ಎಂದೇ ಹೇಳಬಹುದು. ಉದಾ:

ಶ್ರೀಗೆ ಕುಳಸದಮಮೆನೆ ತೊಳಪ ಮಣಿಭವನದೊಳ್
ರಾಗರಸಮಾದವೆ ಸರಸಿರುಹಸಮುವದನದೊಳ್
ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್
ಲಲಿತಗಂಗಾನದೀಲಹರಿಕಾತಲ್ಪದೊಳ್

(ಮೂ. ೭-೧, ಸಂ. - ೧೦೩)

ದೇವವನಿಗೆಯರ ಪರಿವಿಡಿಯೊಳಡಿಗುಟ್ಟೆಯುಂ
ದೇವಗಣಿಕೆಯರೆ ಕೊಳೆ ಪಾಡೆ ದನಿ ಮುಟ್ಟೆಯುಂ
ದೇವಿ ಮರುದೇವಿ ವಿಶದೀಕೃತಾಶಾಂತದೊಳ್
ಭಾವಿಜನಜನನಿ ಸತಿ ಪವಡಿಸಿ ನಿಶಾಂತದೊಳ್

(ಮೂ.೭-೨, ಸಂ.. ೧೦೩)

ಚಂಡಗಜಗಮನೆ ಪರಿಖಂಡಿತಾಘಾಳಿಯಂ
ಕಂಡಳೀ ರೆಂಟುಮೊಳ್ಗನಸಿನೆಸೆವೋಳಿಯಂ
ಕರಟತಟಗಳಿತಮದರುಚಿರಮುಖತೇಜನಂ
ಶರದಮಳಜಳನಿಭ ಧವಜಳಗರಾಜನಂ

(ಮೂ.೭-೩, ಸಂ.. ೧೦೩)

ಹಿಮಶಿಖರಸಮವಿಗ್ರಹಸನಾಥನಂ
ಕುಮುದದಳಧವಳರುಚಿರುಚಿರ ವೃಷನಾಥನಂ
ಬಾಲಹಿಮಕಿರಣದಂಷ್ಟ್ರಾನನಜ್ಯೋತಿಯಂ
ಲೋಲಲಾಂಗೂಲಮದಸಿಂಧುರಾರಾತಿಯಂ

(ಮೂ.೭-೪, ಸಂ. ೧೦೩)

ಕರಿಕರೋದ್ಧೃತಪಯ: ಪೂರ್ಣಘಟವಳಯೆಯಂ
ದರದಳಿತಕರಕಳಿತಸರಸಿರುಹನಿಳಯೆಯಂ
ಪ್ರಕಟಮೃದುಮಧುರರಸನಿಪತದಳಮೊಳೆಯಂ
ವಿಕಚನವಮಾಳಿಕಾಕು ಸುಮನವಮಾಳೆಯಂ

(ಮೂ. ೭-೫, ಸಂ. ೧೦೩)

ಕುಮುದವನವನಧಿವನ ವಿಶದಶಕರಕಿರಣನಂ
ವಿಮಳತರಗಗನ ತಿಳತಿಳಕಹಿಮಕಿರಣನಂ
ವಿದಿತಕರನಿಕರ ದಳಿತಾಬ್ಜಿನೀಷಂಡನಂ
ಉದಯ ಗಿರಿಶಿಖರ ಗತತರುಣಮಾರ್ತಂಡನಂ

(ಮೂ. ೭-೩, ಸಂ.. ೧೦೩)

ಲಲಿತವಿದ್ಯುಲ್ಲತಾರುಚಿರನಿಜಮಾಳಯಂ
ಮಿಳರ್ವ ಜಳದೊಳಗೆ ಪೊಳೆವೆರಡುವಿಳೆವಾಳೆಯಂ
ಕಳಿತಸರಸಿಜರಜೋರಂಜಿತಾಚ್ಛಾಂಭಮಂ
ಜಳಜದಳನಯನಯುಗೆ ಪೊಣರ್ದ ಮಣಿಕುಂಭಮಂ

(ಮೂ.೭-೭, ಸಂ.-೧೦೩)

ಚಳತಜಳವಿಹಗರವರಮ್ಯದಿಗ್ವಳಯಮಂ
ಜಳಜಕುಳನಿಭೃತಜಳಪದ್ಮಿನೀನಿಳಯಮಂ
ಶರದಮಳಗಗನತಳವಿಭವಸಂಕಾಶಿಯಂ
ಕರಿಮಕರಕರದಳಿತವೀಚಿವಾರಾಶಿಯಂ

(ಮೂ.೭-೮, ಸಂ.. ೧೦೩)

ಸೌಂದರಾನೇಕ ಮಣಿರುಚಿಜಳಸ್ಯಂದಿಯಂ
ಮಂದರೋತ್ತುಂಗಕಂಠೀರವಾಸಂದಿಯಂ
ವ್ಯಾಳಸುರಸುಂದರೀಜನಿತಬಹುಮಾನಮಂ
ದ್ಯಾಳಸುರಸುಂದರೀಜನಿತಬಹುಮಾನಮಂ
ಸ್ಥೂಳಮಣಿಖಚಿತಸುರ ಪರಿದೃಢವಿಮಾನಮಂ

(ಮೂ. ೭-೯, ಸಂ. ೧೦೩)

ಫಣಿಫಣಾಸ್ಫುರಿತ ಮಣಿದೀಪಿಕಾವ್ಯೂಹಮಂ
ಕ್ವಣಿತಮಣಿಕಿಂಕಿಣೀನಿನದ ಫಣಿಗೇಹಮಂ
ವಿರಚಿತೋದ್ದಾಮಸುರಪತಿಧನುವ್ರಾತಮಂ
ಸುರುಚಿರಾಂಶೊಲ್ಲಸದ್ರತ್ನಸಂಘಾತಮಂ

(ಮೂ.೭-೧೦, ಸಂ. ೧೦೩)

ಧೃತಧಗದ್ಧಗಿತರವ ನಿರ್ಮಳಶಿಖಾಳಿಯಂ
ಸತತಗತಿಪಥಮನಡರ್ವುಜ್ಜ್ವಳಜ್ವಾಲೆಯಂ
ರಜತಗಿರಿರುಂದ್ರನಂ ಜಿತಶರಚ್ಚಂದ್ರನಂ
ನಿಜವದನವನಜಮಂ ಪುಗುವ ವೃಷಭೇಂದ್ರನಂ

(ಮೂ. ೭-೧೧, ಸಂ. ೧೦೩)

ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ
ತೀಡೆ ಕಿವಿಗುಚಿತಮಂಗಳನಿನದಮನ್ನೆಗಂ
ನಿಜಮುಖಾಂಬುಜಮುಮಂಬುಜಮುಮೊಡನಲರ್ವಿನಂ
ನಿಜದ ಚೆಲ್ವಮರೆ ನಿಡುವುರ್ವುಗಳ್ ನಿವಿಂರ್ವಿನಂ.

(ಮೂ. ೭-೧೨, ಸಂ ೧೦೬)

ತಱಿತಱಾಗಿರ್ದ ಕುಂಕುಮದ ನಿಜವದನಮುಂ
ತೆಱಿದ ಕಣ್ಗಳೊಳೆ ಧವಳಿಪಿದ ನಿಜವದನಮುಂ
ಚಲಿತಧಮ್ಮಿಲ್ಲದೊಳ್ ತೊಡರ್ವ ಪೂಮಾಲೆಯುಂ
ಲಲಿತಮುಖಸೌರಭ್ಯಕ್ಕೆಱಿಗುವಳಿಮಾಳೆಯುಂ

(ಮೂ. ೭-೧೩, ಸಂ ೧೦೬)

ಬಗೆಗೊಳಿಸಿ ತಳರ್ದು ಗಜಗಮನೆ ಸುರನಾರಿಯರ್
ಮುಗಿದ ಕೈವೆರಸು ಬರೆ ಜನಮನೋಹಾರಿಯರ್
ಬಂದು ಜಗದಧಿಪನಂ ಸೋಂಕಿ ಕುಳ್ಳಿರ್ಪುದುಂ
ಬಂದ ಬರವವನಿಪತಿಗೊಸಗೆಯಂ ತರ್ಪುದುಂ

(ಮೂ. ೭-೧೪, ಸಂ ೧೦೬)

ಕುಂದಳದಳಧವಳದಶನಾಂಶುಗಳ್ ಪೊಳೆವಿನಂ
ಸಂದ ಕನಸುಗಳನವನೊಸೆದು ಸತಿ ಬಗೆವಿನಂ
ಕ್ರಮದಿನಱಿಪುವುದು ಮವನಱಿದು ಧರಣೀಶ್ವರಂ
ನಿಮಗೆ ಮಗನುಚಿತಧವಳಾತಪತ್ರೇಶ್ವರಂ

(ಮೂ. ೭-೧೫, ಸಂ ೧೦೬)

ದಿವದಿನವತರಿಪನಪರಿಮಿತಪುಣ್ಯೋದಯಂ
ದಿವಿಜಪತಿಕೃತ ಮಹಾಶ್ಚರ್ಯಮಹಿಮೋದಯಂ
ದುರಿತಬಳತಿಮಿರದಳ(ದ)ಳನಕರ ದಿನಕರಂ
ಲಲಿತಬುಧ ಕುವಲಯಾನಂದಕರಹಿಮಕರಂ

(ಮೂ.೭-೧೬, ಸಂ.೧೦೬)

ತಡೆಯದೆನೆ ವನಜಮುಖಿ ಪಿರಿದುಮನುರಾಗದಿಂ
ದಡಿಗಡಿಗೆ ನೊಗಯಿಸಿದಳಾಗ ಮೊಗರಾಗದಿಂ

ಶ್ರೀಗೆ ಕುಳಸದನಮೆನೆ ತೊಳಪ ಮಣಿಭವನದೊಳ್
ರಾಗರಸಮೊದವೆ ಸರನಿರುಹ ಸಮ ವದನದೊಳ್
ಪೊಳೆವ ಪಟ್ಟದೊಳೆ ಸೊಗಯಿಸುವ ಮೃದುತಲ್ಪದೊಳ್
ಲಳಿತ ಗಂಗಾನಂದೀ ಲಹರಿತಾ ತಲ್ಪದೊಳ್
ದೇವಿ ಮರುದೇವಿ ವಿಶದೀಕೃತಶಾಂತದೊಳ್
ಭಾವಿ ಜಿನ ಜನನಿ ಸತಿ ಪವಡಿಸಿ ನಿಶಾಂತದೊಳ್
ಚಂಡಗಜಗಮನೆ ಪರಿಖಂದಿತೌಘಾಳಿಯಂ
ಕಂಡಳೀಕಿಂಟುಮೊಳ್ಗನಸಿನೆಸೆವೋಳಿಯಂ
ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ
ತೀಡೆ ಕಿವಿಗುಚಿತ ಮಂಗಳ ನಿನದಮನ್ನೆಗಂ
ನಿಜಮುಖಾಂಬುಜಮಂಬುಜಮುಮೊಡನಲರ್ವಿನಂ
ನಿಜದ ಜೆಲ್ವಮರೆ ನಿಡುವುರ್ವುಗಳ್ ನಿಮಿರ್ವಿನಂ
ಬಗೆಗೊಳಿಸಿ ತಳರ್ದು ಗಜಗಮನೆ ಸುರನಾರಿಯರ್
ಮುಗಿದ ಕೈವೆರಸು ಬರೆ ಜನಮನೋಹಾರಿಯರ್
ಬಂದು ಜಗದಧಿಪನಂ ಸೋಂಕಿ ಕುಳ್ಳಿರ್ಪುದುಂ
ಬಂದ ಬರವವನಿಪತಿಗೊಸಗೆಯಂ ತರ್ಪುದುಂ
ಕುಂದದಳ ಧವಳ ದಶನಾಂಶುಗಳ್ ಪೊಳೆವಿನಂ
ಸಂದ ಕನಸುಗಳನವನೊಸೆದು ಸತಿ ಬಗೆವಿನಂ
ಕ್ರಮದಿನೇಱಿಸುವುದುಮವನಱಿದು ಧರಣೀಶ್ವರಂ
ನಿಮಗೆ ಮಗನುಚಿತಧವಳಾ ತಪತ್ತೇಶ್ವರಂ
ದಿವದಿನವತರಿಪನಪರಿಮಿತ ಪುಣ್ಯೋದಯಂ
ದಿವಿಜಪತಿ ಕೃತ ಮಹಾಶ್ಚರ್ಯ ಮಹಿಮೋದಯಂ
ತಡೆಯದೆನೆ ವನಜಮುಖಿ ಪಿರಿದುಮನುರಾಗದಿಂ
ದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ

(ಮೂ.೭-೧ ರಿಂದ ೭-೧೬, ಸಂ. ೧೦೬ಪ.ಭಾ)

**ವಿವರಣೆ:** ಮರುದೇವಿ ಗಂಗಾನದಿಯ ಮಣಿಭವನದಲ್ಲಿ ಪವಡಿಸಿದಾಗ ೧೬ ಕನಸುಗಳನ್ನು ಕಾಣುತ್ತಾಳೆ. ಪದ್ಯ ೨ ರಿಂದ ೧೧ರವರೆಗೆ ಈ ಪದ್ಯಗಳಲ್ಲಿ ವರ್ಣಿತವಾಗಿದೆ. ಈ ಷೋಡಶ ಸಪ್ನಗಳನ್ನು ಬಿಟ್ಟಿರುವುದು ಕಥಾ ದೃಷ್ಟಿಯಿಂದ ಅಗತ್ಯವೆನಿಸದಿದ್ದರೂ ಜೈನಧರ್ಮದ ಪುರಾಣಲಕ್ಷಣಗಳ ಹಿನ್ನೆಲೆಯಲ್ಲಿ ಅವಶ್ಯಕವಾದ ಭಾಗವಾಗಿರುತ್ತದೆ. ಎಲ್ಲ ಜೈನ ತೀರ್ಥಂಕರರ ಪುರಾಣಗಳಲ್ಲಿ (ಆದಿ ಪುರಾಣ. ಅಜಿತಪುರಾಣ. ನೇಮಿನಾಥಪುರಾಣ. ಪಾರ್ಶ್ವಪುರಾಣ. ಶಾಂತಿಪುರಾಣ ಇತ್ಯಾದಿ.) ತೀರ್ಥಂಕರನ ತಾಯಿ (ಜನನಿ) ಈ ಷೋಡಶ ಸಪ್ನಗಳನ್ನು

ಕಾಣುವುದು ಸಾಮಾನ್ಯ ಸಂಗತಿಯಾದರೂ ಒಂದು ವಿಶಿಷ್ಟ ಲಕ್ಷಣವಾಗಿದೆ. ಮತ್ತು ಈ ಕನಸುಗಳಿಗೆ ವಿಶೇಷ ಅರ್ಥಗಳಿವೆ. ಹಾಗೆ ವೈಶಿಷ್ಟ್ಯ ಪೂರ್ಣವಾದ ಷೋಡಶವರ್ಣನೆಗಳನ್ನು ಕೈಬಿಟ್ಟಿರುವುದು ಅಷ್ಟೇನು ಸಮಂಜಸವೆನಿಸುವುದಿಲ್ಲ.

ನಂತರ ಬರುವ ಜನ್ಮಾಭಿಷೇಕ ಕಲ್ಯಾಣ, ಪರಿನಿಷ್ಕ್ರಮಣ ಕಲ್ಯಾಣ, ಕೇವಲ ಜ್ಞಾನ ಕಲ್ಯಾಣ, ಪರಿನಿರ್ವಾಣ ಕಲ್ಯಾಣ ಭಾಗವನ್ನು ಕಾವ್ಯ ಸಂಗ್ರಹದ ದೃಷ್ಟಿಯಿಂದ, ವರ್ಷದ ಅವಧಿಯೊಳಗೆ ಈ ಪೂರ್ಣಕಾವ್ಯದ ಸಮಸ್ತ ಕಥೆಯನ್ನು ವಿದ್ಯಾರ್ಥಿಗಳಿಗೆ ತಿಳಿಸುವ ಉದ್ದೇಶದಿಂದ ಮೇಲೆ ತಿಳಿಸಿರುವ ೪ ಕಲ್ಯಾಣಗಳಲ್ಲಿ ಬರುವ ವರ್ಣನಾಭಾಗಗಳನ್ನು ಬಿಟ್ಟಿರುವುದು ಅವಶ್ಯಕವೆನಿಸಿದೆ.

## ಆ. ಪಾಠಾಂತರಗಳು ಮತ್ತು ಆಕರಗಳ ಸಂಗ್ರಹ

ಎಲ್. ಗುಂಡಪ್ಪನವರು ತಮ್ಮ 'ಆದಿಪುರಾಣ ಸಂಗ್ರಹ'ಕ್ಕೆ ಬಳಸಿಕೊಂಡ ಆಕರಗಳು ಈ ರೀತಿ ಇವೆ.

೧. ಮೈಸೂರು ಓರಿಯಂಟಲ್ ಲೈಬ್ರರಿಯವರು ಪ್ರಕಟಿಸಿದ ಮುದ್ರಿತ ಪ್ರತಿ. ಸಂಪಾದಕ: ಎಸ್.ಜಿ. ನರಸಿಂಹಾಚಾರ್ಯ.

೨. ಶ್ರವಣಬೆಳಗೊಳದ ಮಠದ ಎರಡು ಓಲೆಯ ಪ್ರತಿಗಳು.

೩. ಮೂಡಬಿದರೆಯ ಮಠದ ಎರಡು ಓಲೆಯ ಪ್ರತಿಗಳು.

"ಇವುಗಳಲ್ಲಿ ಶ್ರವಣಬೆಳುಗೊಳದ ಮಠದ ಒಂದು ಪ್ರತಿ ಹೆಚ್ಚು ಶುದ್ಧವಾಗಿದೆ. ಅದೇ ಪ್ರಾಚೀನ ಪುಸ್ತಕವೆಂದು ಕಾಣುತ್ತದೆ. ಮೂಡಬಿದರೆಯ ಪ್ರತಿಗಳೂ ಕೆಲವು ಕಡೆ ಬಹು ಸಮರ್ಪಕವಾದ ಪಾಠಗಳನ್ನು ಒದಗಿಸಿಕೊಟ್ಟವು." ಎಂದಿದ್ದಾರೆ.

**ಪಾಠಾಂತರಗಳು :**

ವಿದ್ಯಾರ್ಥಿಗಳ ದೃಷ್ಟಿಯಿಂದ ಪಾಠಾಂತರಗಳಿಗೆ ವಿಶೇಷ ಗಮನ ನೀಡಿ ಗುರುತಿಸಿಲ್ಲ. ಕೆಲವೇ ಕೆಲವು ಪಾಠಾಂತರಗಳನ್ನು ಮಾತ್ರವೇ ಗುರುತಿಸಿದ್ದಾರೆ. ಅನಿವಾರ್ಯವಾದ ಕಡೆಗಳಲ್ಲಿ ಅನುವಾದವನ್ನು ಗುರುತಿಸಿದ್ದಾರೆ.

"ಈ 'ಆದಿಪುರಾಣ ಸಂಗ್ರಹ'ದಲ್ಲಿ ಓರಿಯಂಟಲ್ ಲೈಬ್ರರಿಯ ಮುದ್ರಿತ ಪ್ರತಿಯನ್ನೇ ಸಾಮಾನ್ಯವಾಗಿ ಅನುಸರಿಸಿದೆ. ಉಚಿತವೆಂದು ತೋರಿದ ಕಡೆ, ಆ ಸಂಪಾದಕರು ಅಡಿ ಟಿಪ್ಪಣಿಯಲ್ಲಿ ಕೊಟ್ಟ ಪಾಠಾಂತರವನ್ನು ಅಂಗೀಕರಿಸಿದೆ. ಅಡಿ ಟಿಪ್ಪಣಿಯ ಪಾಠಾಂತರವು ಸಮರ್ಪಕವೆನಿಸಿದ ಕೆಲವು ಸಂದಿಗ್ಧ ಸಂದರ್ಭಗಳಲ್ಲಿ ಮಾತ್ರ ಓಲೆಗರಿಗಳನ್ನು ನೋಡಿ ಸರಿಕಾಣಿಸಿದ ಪಾಠವನ್ನು ಆಯ್ದುಕೊಂಡಿದೆ. ಒಂದೆರಡು ಕಡೆ ಹೊರತು ಈ ಸಂಗ್ರಹದಲ್ಲಿ ಎಲ್ಲೂ ಪಾಠಾಂತರಗಳನ್ನು ಗುರುತಿಸಿಲ್ಲ; ಅಂಗೀಕೃತ ಪಾಠವನ್ನು ಮಾತ್ರ ಮುದ್ರಿಸಿದೆ" ಅವುಗಳು ಈ ರೀತಿ ಇವೆ.

**ಎಲ್. ಗುಂಡಪ್ಪನವರು ನೀಡಿದ ಪಾಠಾಂತರಗಳಿಗೆ ಉದಾಹರಣೆ**

**ಗದ್ಯದಲ್ಲಿ ಗದ್ಯಭಾಗ, ಪದ್ಯ ಭಾಗದ ಪದಗಳ ಅಳವಡಿಕೆ ವಿಧಾನ.**

ಗದ್ಯ-ಪದ್ಯ ಭಾಗಗಳನ್ನು ಸಂಯೋಜಿಸಿ ಗದ್ಯ ಸಂಗ್ರಹ ಮಾಡಿದ್ದರೂ ಇದರಲ್ಲಿರುವ ಇನ್ನೊಂದು ವಿಶೇಷತೆಯೆಂದರೆ ಪದ್ಯದ ಕೆಲವು ಪದಗಳನ್ನು ಗದ್ಯಕ್ಕೆ ಅಳವಡಿಸಿಕೊಂಡು ಹೋಗುವ ವಿಧಾನ.

ಉದಾ:

ವ॥ ಎಂದು ಮುನ್ನಮಾ ಪಟದೊಳಾಕೆ ಬರೆಯದೆ ಬಂಚಿಸಿದ ಅವಿನಾಣಂಗಳನಱಿಯೆ ಬೆಸಗೊಂಡು ಪಟಮಂ ಕೈಕೊಂಡು ಪಂಡಿತೆ ಪೋಗಿ ಮಂದಾರಮುನೀಂದ್ರವೃಂದಾರಕವೃಂದಸೌಂದರಮುಮಾಸನ್ನಭವ್ಯವ್ಯೋಮಚರಭೂಚರನಿಚಯನಿಚಿತಮುಮಾಗಿ- ಜಗತ್ಪೂತಮೆನಿಸಿದಮಹಾಪೂತಜನಾಲಯಕ್ಕೆ ಬಂದು ಅನೇಕ ದೂರ್ತಜನ- ಮನಸ್ಸಮ್ಮೋಹನತಮಃಪಟಮಂವಿಚಿತ್ರಚಿತ್ರಪಟಮನಾ ಚೈತ್ಯಾಲಯದ ಕೆಲದ ಪಟ್ಟಸಾಲೆಯಮುಂತೆ ನೇಱಿ ನಿಜಾಭಿಲಷಿತಕಾರ್ಯಸಿದ್ಧಿಯೆನೆ ಪಾರುತ್ತಮಿರ್ದಳ್ ಅನ್ನೆಗಮಿತ್ತ ಷಟ್ಖಂಡಮಂಡಿತ ವಸುಧಾಮಂಡಳಮಂ ಬಾಯ್ಕೇಳಿಸಿ.

> ಪಿರಿದುಂ ಪುಣ್ಯೋದಯಂ ತನ್ನುದಯಮನಱಿಪುತ್ತಿರ್ಪಿನಂ ಮರ್ತ್ಯವಿದ್ಯಾ
> ಧರರಾಜವ್ಯಂತರಾಧೀಶ್ವರಕರಸೀಜಂಗಳಂ ವಕ್ತ್ರಚಂದ್ರ
> ಸ್ಫುರಿತೋದ್ಯತ್ಕಾಂತಿ ನಿಚ್ಚಂ ಮುಗಿಯಿಸೆ ಜಿತದಿಙ್ಮಂಡಲಂ ಬಂದು ಪೊಕ್ಕಂ
> ಪುರಮಂ ಶ್ರೀವಜ್ರದಂತಂ ಮಗಳ ಮದುವೆಯಂ ಮಾಡಲದ್ಯುಕ್ತಚಿತ್ತಂ

(ಮೂ.೩-೮೩, ಸಂ. ೫೪(೨) ಗ)

ವ॥ ಅಂತು ನಿಜಾನ್ವಯರಾಜಧಾನಿಯಂ ಪೊಕ್ಕು ಮುವತೆಣ್ಛಾಸಿರ ಮಕುಟಬದ್ಧರಿಂ ಮೂರ್ದಾಭಿಷಿಕ್ತನಾಗಿ ಸಕಳಚಕ್ರವರ್ತಿಪದದೊಳ್ ನಿಂದು ಸಿಂಹಾಸನರೂಢ ನಾರೂಢಯೌವನೆಯಮಂತರ್ನಿಗೂಢಶೋಕೋದ್ರೇಕಮೂಕೆಯುಮಾಗಿರ್ದ ನಿಜತನೂಜೆಗೆ ಬೞಿಯನಟ್ಟಿದಾಗಳ್.

**ಎಲ್. ಗುಂಡಪ್ಪನವರ ಸಂಗ್ರಹಿತ ಭಾಗ**

ಇತ್ತ ವಜ್ರದಂತಂ ಷಟ್ಖಂಡಮಂಡಿತ **ವಸುಂಧರಾತಳಮಂ** ಬಾಯ್ಕೇಳಿಸಿ ನಿಜಾನ್ವಯ ರಾಜಧಾನಿಯಂ ಪೊಕ್ಕು ಚಕ್ರವರ್ತಿಪದದೊಳ್‌ನಿಂದು ಮಗಳ ಮದುವೆಯಂ ಮಾಡಲೆಂದು ಬೞಿಯನಟ್ಟಿದಾಗಳ್

(ಸಂ.೫೪(೨) ಗ)

**ವಿವರಣೆ :** ಇಲ್ಲಿ ಆದಿಮೂ ೩-೮೫ರ ಗದ್ಯ ಭಾಗದಲ್ಲಿ ಕೊನೆಯ ಸಾಲಾದ **"ಅನ್ನೆಗಮಿತ್ತ ಷಟ್ಖಂಡಮಂಡಿತ"** ... ಭಾಗವನ್ನು ಉಳಿದ ಪದ್ಯಭಾಗ ಮತ್ತು ಗದ್ಯಭಾಗಗಳಿಗೆ ಸೇರ್ಪಡೆ ಮಾಡಿ ಗದ್ಯಭಾಗವನ್ನು ರಚಿಸಿದ್ದಾರೆ. ಗದ್ಯ ಭಾಗದಲ್ಲಿ ಆದಿಮೂಲದ ೩-೮೫ರ ಗದ್ಯ ಭಾಗ ಎಂದು **"ಮುನ್ನಮಾ.... ವಸುಧಾರಾಮಂಡಳಮಂ ಬಾಯ್ಕೇಳಿಸಿ"** ಎಂಬ ಮೂಲಪಠ್ಯಕ್ಕೆ (ಕೆ.ಎಲ್.

ನರಸಿಂಹಶಾಸ್ತ್ರಿ) **ವಸುಧಾರಮಂಡಳಮಂ** ಎಂದು ಬಳಸಿದ್ದಾರೆ. ಈ ಪದಕ್ಕೆ [ ] ಚೌಕಾವರಣ. ಇಲ್ಲದೇ ಇರುವುದರಿಂದ ಇದು ಊಹಾ ಪಾಠವಲ್ಲ ಅನ್ಯಪ್ರತಿಪಾಠ ಸ್ವೀಕಾರ ಎನಿಸುತ್ತದೆ. ಗದ್ಯಭಾಗವನ್ನು ಸಂಗ್ರಹ ಮಾಡುವಾಗ ಸಾಮಾನ್ಯವಾಗಿ ಯಥಾವತ್ತಾಗಿ ಮೂಲ ಪಾಠವನ್ನು ಸ್ವೀಕರಿಸಿದ್ದಾರೆ. ಆದರೆ ಕೆಲವು ಕಡೆ ಗದ್ಯ ಭಾಗದಲ್ಲಿ ಬೇರೆ ಪಾಠಾಂತರವನ್ನು ಸ್ವೀಕರಿಸಿದ್ದಾರೆ. **ಷಟ್ಖಂಡ... ವಸುಂಧರಾತಳಮಂ ಬಾಯ್ಕೇಳಿಸಿ.** ಎಂದು ಇಲ್ಲಿ ಬಳಸಿದ್ದಾರೆ.

**ಉದಾ : ಮೂಲ – ವಸುಧಾರಾಮಂಡಳಮಂ**

**ಸಂ – ವಸುಂಧರಾತಳಮಂ**

ಸಂಗ್ರಹ ಮಾಡುವ ವಿಧಾನದಲ್ಲಿ ಪಾಠಾಂತರವನ್ನು ನೀಡಿದ್ದಾರೆ. ಆದ್ದರಿಂದ ಇದು ಪಾಠಾಂತರವನ್ನು ಒಳಗೊಂಡ ಗದ್ಯಪದ್ಯ ಸಂಗ್ರಹ ಭಾಗ.

ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಆದಿಪುರಾಣವನ್ನು ಇವರ ಸಂಗ್ರಹ ಮಾಡಿದರೂ ಕಾವ್ಯದ ದೃಷ್ಟಿಯಿಂದ ಇದು ಸೂಕ್ತವಲ್ಲ ಎಂದೇ ಹೇಳಬಹುದು. ಯಾಕೆಂದರೆ ಅತಿ ಸೊಗಸಾದ ವರ್ಣನಾ ಭಾಗಗಳು. ಶೃಂಗಾರ ಭಾಗಗಳು ಆದಿಪುರಾಣ ಸಂಗ್ರಹದಲ್ಲಿ ಮರೆಮಾಚಿದೆ. ಹಾಗೆಯೇ ನೀರಸವಾದ ವರ್ಣನಾ ಭಾಗಗಳನ್ನು ಬಿಟ್ಟಿರುವುದು ಸೂಕ್ತವೆನಿಸಿದೆ.

ಸಂಗ್ರಹ ದೃಷ್ಟಿಯಿಂದ 'ಆದಿಪುರಾಣ ಸಂಗ್ರಹ'ವನ್ನು ಎಲ್. ಗುಂಡಪ್ಪನವರು ಸಂಪಾದಿಸಿದ್ದರಿಂದ ಇದು ವಿದ್ಯಾರ್ಥಿಗಳಿಗೆ ನೀಡಿದ ಕಾಣಿಕೆ ಎಂದೇ ಇದನ್ನು ಹೇಳಬಹುದು. ಒಬ್ಬ ಹಿಂದು. ಜೈನ ಧರ್ಮದ ಮೂಲ ತಿರುಳನ್ನು ಅರಿತು ಕರಗತ ಮಾಡಿಕೊಂಡಿರುವುದು ತುಂಬ ಆಶ್ಚರ್ಯವನ್ನು ಉಂಟುಮಾಡುತ್ತದೆ. ಇವರ ಬರವಣಿಗೆಯಲ್ಲಿ ಸಹಜತೆಯನ್ನು ಕಾಣಬಹುದು.

ಕ್ಲಿಷ್ಟವಾದ ಕಾವ್ಯವನ್ನು ಓದುಗರಿಗೆ ಪರಿಚಯ ಮಾಡುವ ದೃಷ್ಟಿಯಿಂದ ಸರಳ ಮಾರ್ಗವನ್ನು ಅನುಸರಿಸಿದ್ದಾರೆ. ಸಂದಿಗ್ಧ ಪದಗಳನ್ನು ಸ್ಪಷ್ಟವಾಗಿ. ಸರಳವಾಗಿ ಹೇಳಿದ್ದಾರೆ. ಈ ಎಲ್ಲದ್ದರಿಂದ ಆದಿಪುರಾಣ ಸಂಗ್ರಹ ನಮಗೆ ಅವರ ಸಂಪಾದನಾ ಪುಸ್ತಕಗಳ ಪಟ್ಟಿಯಲ್ಲಿ ಮುಖ್ಯವಾಗಿ ಕಾಣುತ್ತದೆ.

ಈ ಹಿನ್ನೆಲೆಯಲ್ಲಿ ಆದಿಪುರಾಣ ಸಂಗ್ರಹ ಒಂದು ಆದರ್ಶ ರೀತಿಯದಾಗಿದ್ದು ಮತ್ತು ಅನುಕರಣೀಯವಾದಂತಹ ಕ್ರಮವಾಗಿದೆ.[21]

---

[21] ಪ್ರೊ|| ಡಿ. ಲಿಂಗಯ್ಯ ಅವರ ಲೇಖನ. ಆದಿಪುರಾಣದ ಸಂಗ್ರಹ ಕುರಿತು

# ಅಧ್ಯಾಯ – ೫

## ಪರಿಸಮಾಪ್ತಿ

ಕನ್ನಡದಲ್ಲಿ ೧೯ನೇ ಶತಮಾನದವರೆಗೆ ತಾಳೆಗರಿಗಳ ಹಸ್ತ ಪ್ರತಿಗಳ ಯುಗವೆಂದು ಕರೆಯಬಹುದು. ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಕ್ರೈಸ್ತ ಮಿಷನರಿಗಳಿಂದ ಕನ್ನಡದಲ್ಲಿ ಕಾಗದ ಬಳಕೆಯ ಅಚ್ಚಿನ ಯುಗ ಪ್ರಾರಂಭವಾಯಿತು. ಪ್ರಾರಂಭದಲ್ಲಿ ಕನ್ನಡದಲ್ಲಿ ಪ್ರಸಿದ್ಧವಾದ ಕಾವ್ಯಗಳಾದ ಕುಮಾರವ್ಯಾಸ ಭಾರತ, ಪಂಪರಾಯಣ, ಅನುಭವಾಮೃತಸಾರ, ಚೆನ್ನಬಸವ ಪುರಾಣ, ಜೈಮಿನಿ ಭಾರತ, ಸೋಮೇಶ್ವರ ಶತಕ, ದಾಸರ ಕೀರ್ತನೆಗಳು ಮೊದಲಾದವು ಗಳ ಪ್ರಕಟಣೆಯತ್ತ ಕ್ರೈಸ್ತ ಮಿಷನರಿಗಳ ಗಮನ ಹೋಯಿತು. ಅದರ ಜತೆಗೆ ಶಬ್ಧಕೋಶ, ವ್ಯಾಕರಣ, ಛಂದಸ್ಸಿನ ಗ್ರಂಥಗಳಿಗೆ ಕಿಟಲ್, ರೀವ್ ಮೊದಲಾದವರು ಗಮನವಿತ್ತರು. ಏಕೆಂದರೆ ಕ್ರೈಸ್ತ ಮಿಷನರಿಗಳಿಗೆ ಮತಪ್ರಚಾರಕ್ಕೆ ಸ್ಥಳೀಯ ಭಾಷೆಗಳ ಆಳ ಅಧ್ಯಯನ, ಭಾಷೆಯ ಕಲಿಕೆ ಅಗತ್ಯವಿತ್ತು. ಇದಕ್ಕಾಗಿ ಕೆಲವು ಪ್ರತಿಭಾವಂತ ಕ್ರೈಸ್ತ ಮಿಷನರಿಗಳು ತಮ್ಮ ಸ್ವಪ್ರತಿಭೆಯಿಂದ ದೇಶೀಯ ಪಂಡಿತರನ್ನು ಸರಿಗಟ್ಟಬಲ್ಲ ಪಾಂಡಿತ್ಯ ಗಳಿಸಿದರು. ಅನಂತರ ದೇಶೀಯ ಪಂಡಿರು ಆಂಗ್ಲ ವಿದ್ಯಾಭ್ಯಾಸದ ಪರಿಣಾಮವಾಗಿ ಎಚ್ಚೆತ್ತು ಕನ್ನಡದ ಶ್ರೇಷ್ಠ ಕಾವ್ಯಗಳನ್ನು ಇತರ ಗದ್ಯ ಗ್ರಂಥಗಳನ್ನು ಶಾಸ್ತ್ರ ಗ್ರಂಥಗಳನ್ನು ಪ್ರಕಟಿಸತೊಡಗಿದರು. ಎಂ.ಎ. ರಾಮಾನುಜಯ್ಯಂಗಾರ್ ಮತ್ತು ಎಸ್.ಜಿ.ನರಸಿಂಹಾಚಾರ್ ಅವರ ಕಾವ್ಯಮಂಜರಿ ಕಾವ್ಯಕಲಾನಿಧಿಯಲ್ಲಿ ಪ್ರಕಟಣೆಗಳು ಇತಿಹಾಸವನ್ನೇ ನಿರ್ಮಿಸಿದವು.

ಮೂಲ ಕನ್ನಡ ಕಾವ್ಯಗಳ ಪ್ರಕಟಣೆಯಿಂದ ಕ್ರೈಸ್ತ ಹಾಗೂ ದೇಶೀಯ ಪಂಡಿತರಿಂದ ಮೂಲ ಕಾವ್ಯ ಪ್ರಕಟಣ ಯುಗ ಪ್ರಾರಂಭವಾಯಿತು. ಅನಂತರ ಶಾಲಾ ವಿದ್ಯಾರ್ಥಿಗಳಿಗಾಗಿ, ಕನ್ನಡ ಕಾವ್ಯಗಳ ಪರಿಚಯ ಮಾಡಿಸಲು ಆಯ್ದ ಕಾವ್ಯಗಳ ಭಾಗಗಳನ್ನು ಪಠ್ಯವಾಗಿ ಇದರ ಪದ್ಧತಿ ಬಳಕೆ ಬಂದಿತು. ಪ್ರಾಕ್ಕಾವ್ಯ ಮೂಲಿಕೆ, ಪದ್ಯಸಾರ ಗ್ರಂಥಗಳು ಮಾದರಿ ಆದವು.

ಅನಂತರ ೨೦ನೇ ಶತಮಾನದ ಆದಿಭಾಗದಲ್ಲಿ ಮದ್ರಾಸು, ಮುಂಬೈ ವಿಶ್ವವಿದ್ಯಾನಿಲಯಗಳಲ್ಲಿ ಮೂಲ ಕಾವ್ಯಗಳನ್ನು ಪಠ್ಯವಾಗಿ ಇಟ್ಟಿರುವುದರ ಜೊತೆಗೆ ಕಾವ್ಯಗಳ ಭಾಗಗಳನ್ನು ಪಠ್ಯವಾಗಿಡಲು ಪ್ರಾರಂಭಿಸಿದವು. ಮೈಸೂರು ವಿಶ್ವ ವಿದ್ಯಾಲಯ ಪ್ರಾರಂಭವಾದ ಮೇಲೆ ಬಿ.ಎಂ. ಶ್ರೀಕಂಠಯ್ಯ ಅವರು ಸುವ್ಯವಸ್ಥಿತ ರೀತಿಯಲ್ಲಿ 'ಕನ್ನಡ ಕಾವ್ಯ ಗ್ರಂಥಗಳ ಸಂಗ್ರಹ ಮಾಲೆ' ಪ್ರಕಟವಾಗತೊಡಗಿತು.

ಈ ಮಾಲೆಯಲ್ಲಿ ಇಂದಿಗೂ ಸಂಗ್ರಹ ಕಾವ್ಯ ಹೇಗಿರಬೇಕು. ಎಂಬುದಕ್ಕೆ ಮಾದರಿ ಆಗಿರುವ ಹತ್ತಾರು ಗ್ರಂಥಗಳು ಬಂದವು. ಪಂಪನ 'ಆದಿಪುರಾಣ', ನಾಗಚಂದ್ರನ

'ರಾಮಚಂದ್ರಚರಿತ ಪುರಾಣ', ಜನ್ನನ 'ಯಶೋಧರಚರಿತೆ', ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಮೊದಲಾದ ಸಂಗ್ರಹ ಕಾವ್ಯ ಗ್ರಂಥಗಳು ಪ್ರಕಟವಾದವು.

ಈ ಪ್ರಕಟನೆಗೊಳಿಸಿದ ಕನ್ನಡ ಕಾವ್ಯ ಸಂಗ್ರಹಗಳ ಸಮೃದ್ಧಯುಗ ಪ್ರಾರಂಭವಾಯಿತು. ಹೀಗೆ ಕನ್ನಡದಲ್ಲಿ ಹಸ್ತಪ್ರತಿಯುಗ – ಅಚ್ಚಿನ ಯುಗ ವಿದೇಶಿ ಪಂಡಿತರ ಕನ್ನಡ ಕಾವ್ಯ ಶಾಸ್ತ್ರಗಳ ಪ್ರಕಟಣಾ ಯುಗ ದೇಶೀಯ ಪಂಡಿತರಿಂದ ಕನ್ನಡ ಕಾವ್ಯ ಶಾಸ್ತ್ರಗಳ ಮೂಲ ಗ್ರಂಥಗಳ ಪ್ರಕಟನಾಯುಗ ಆದ ಮೇಲೆ ಕನ್ನಡ ಕಾವ್ಯ ಸಂಗ್ರಹಗಳ ಪ್ರಕಟನಾಯುಗ ಪ್ರಾರಂಭವಾಯಿತು. ಈ ಕನ್ನಡ ಕಾವ್ಯ ಸಂಗ್ರಹಗಳ ಪ್ರಕಟನೆಯಲ್ಲಿ ಎಲ್ಲ ಕಾವ್ಯ ಸಂಗ್ರಹಗಳು ಮೂಲ ಗ್ರಂಥಗಳ ಆಯ್ದಭಾಗಗಳನ್ನು ಸಂಗ್ರಹಿಸಿ ಅವುಗಳಿಗೆ ಪೀಠಿಕೆ, ಟಿಪ್ಪಣಿ. ಶಬ್ಧಕೋಶ. ಮೊದಲಾದ ಆಕರ ಸಾಮಗ್ರಿಗಳೊಡನೆ ಪ್ರಕಟವಾದವು. ಆದರೆ ಈ ಎಲ್ಲ ಕಾವ್ಯ ಸಂಗ್ರಹಗಳಲ್ಲಿ ಕನ್ನಡ ಗ್ರಂಥ ಸಂಪಾದನೆ ಶಾಸ್ತ್ರದ ಬಳಕೆ ಆದದ್ದು ಒಂದು ಹೊಸಹುಟ್ಟು.

ಮೂಲ ಕಾವ್ಯದ ಹತ್ತಾರು ಹಸ್ತಪ್ರತಿಗಳನ್ನು. ಹಲವಾರು ಅಚ್ಚಿನ ಪ್ರತಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದ ಕೃತಿಗಳನ್ನು ಆಧಾರ ಮಾಡಿ ಕೊಂಡು ಕನ್ನಡ ಕಾವ್ಯ ಸಂಗ್ರಹಗಳು ಪ್ರಕಟವಾದವು. ಆದರೆ ಬೆಳೆ ಬರುವ ಮಧ್ಯದಲ್ಲಿ ಕಳೆ ಬೆಳೆಯುವಂತೆ ಪಾಠ ಗ್ರಂಥವಾದರೆ ಪ್ರತಿಗಳು ಖರ್ಚಾಗುತ್ತವೆ, ಹಣ ಬರುತ್ತವೆ ಎಂದು ಮೂಲ ಕಾವ್ಯದ ಪ್ರತಿಗಳ ಪದ್ಯಗಳನ್ನು ಅಲ್ಲಲ್ಲಿ ಕಿತ್ತಿಟ್ಟು ಕಳಪೆ ಕಾವ್ಯಗಳ ಸಂಗ್ರಹಗಳು ಪ್ರಕಟವಾದವು. ಆದರೆ ಘನ ವಿದ್ವಾಂಸರಾಗಿ ಹತ್ತಾರು ವರ್ಷಗಳ ವ್ಯಾಸಂಗದಿಂದ ಹಲವು ಭಾಷೆಗಳ ಪಾಂಡಿತ್ಯದಿಂದ ಸ್ವಪ್ರತಿಭೆಯಿಂದ ಕೆಲವು ವಿದ್ವಾಂಸರು ಎಲ್ಲ ಕಾಲಕ್ಕೂ ನಿಲ್ಲುವ ಕಾವ್ಯಸಂಗ್ರಹಗಳನ್ನು ಮಾಡಿದರು. ಆ ಪೈಕಿ ಎಲ್.ಗುಂಡಪ್ಪನವರ ಪಂಪನ 'ಆದಿಪುರಾಣ ಸಂಗ್ರಹ' ಅದ್ವಿತೀಯವಾದುದು. ಕನ್ನಡದ ಉಳಿದೆಲ್ಲ ಕಾವ್ಯ ಸಂಗ್ರಹಗಳು ಮೂಲ ಗ್ರಂಥದಿಂದ ಪದ್ಯಗಳನ್ನು ಆಯ್ಕೆ ಮಾಡಿಕೊಂಡಿದೆ. ಗದ್ಯ ಭಾಗಗಳನ್ನು ಸಂಕ್ಷಿಪ್ತಗೊಳಿಸಿವೆ. ಆದರೆ ರಸವತ್ತಾಗಿ ಯಾವ ಪದ್ಯವನ್ನಾಗಲಿ ಗದ್ಯಭಾಗ ವನ್ನಾಗಲೀ ಬಿಡುವ ಹಾಗಿಲ್ಲವೆನಿಸುವಂತಹ ಪಂಪನ ಮೇರುಕೃತಿ ಆದಿಪುರಾಣವನ್ನು ಮೂಲಾಶಯಕ್ಕೆ ಧಕ್ಕೆ ಬರದಂತೆ ಕವಿಯ ಪ್ರತಿಭೆ ವಂಚಿತವಾಗದಂತೆ ಓದುಗನಿಗೆ ರಸಕವಳವಾಗುವಂತೆ ಅದ್ಭುತ ಪ್ರತಿಭೆಯಾಗಿ ಗುಂಡಪ್ಪ ವಿಧಾನದಲ್ಲಿ ಆದಿಪುರಾಣವನ್ನು ಸಂಗ್ರಹಿಸಿದ್ದಾರೆ. ಪದ್ಯಗಳನ್ನು ಆಯ್ಕೆ ಮಾಡಿದ್ದಾರೆ. ಪದ್ಯದ ತುಣಕುಗಳನ್ನು ಗದ್ಯದೊಡನೆ ಸೇರಿಸಿ ಗದ್ಯ ಮಾಡಿದ್ದಾರೆ. ಗದ್ಯ ಪದ್ಯಗಳೆರಡನ್ನೂ ಸಂಕ್ಷೆಪಿಸಿದ್ದಾರೆ. ಗದ್ಯ ಸಂಗ್ರಹ ಮಾಡಿದ್ದಾರೆ. ಹಲವಾರು ಪದ್ಯ, ಗದ್ಯ ಭಾಗಗಳನ್ನು ಬಿಟ್ಟಿದ್ದಾರೆ ಎಂಬುದೇ ತಿಳಿಯದ ಹಾಗೆ ಕೊಂಡಿಪದಗಳಿಂದ ಬೆಸುಗೆ ಹಾಕಿದ್ದಾರೆ. ಪಾಠಾಂತರಗಳನ್ನು ಆಯ್ಕೆಮಾಡಿದ್ದಾರೆ. ಹಸ್ತಪ್ರತಿ. ಅಚ್ಚಿನಪ್ರತಿಗಳನ್ನು ಬಳಸಿದ್ದಾರೆ. ಎಲ್ಲ ವಿದ್ವಾಂಸರೂ ಕಾವ್ಯ

ಸಂಗ್ರಹಗಳಲ್ಲಿ ವಿದ್ವತ್ಪೂರ್ಣ ಪೀಠಿಕೆ ಬರೆದಿದ್ದಾರೆ. ಶಬ್ದಕೋಶ, ಟಿಪ್ಪಣಿ, ಅಕಾರಾದಿ ಇತ್ಯಾದಿ ಕೊಟ್ಟಿದ್ದಾರೆ ನಿಜ. ಆದರೆ ಅವುಗಳನ್ನೆಲ್ಲ ಕೊಡುವುದರ ಜತೆಗೆ ಜೈನಕಾವ್ಯವಾದ ಆದಿಪುರಾಣದಲ್ಲಿ ಜೈನ ಧರ್ಮಸಾರ ಬರೆದಿರುವುದನ್ನು ತಿಳಿಸಲು, ಜೈನ ಧರ್ಮ ಕೈಪಿಡಿಯನ್ನು ಪೀಠಿಕೆ ಯಲ್ಲಿ ಅಳವಡಿಸಿದ್ದಾರೆ. ಕನ್ನಡದಲ್ಲಿ ವಿದ್ವಾಂಸರೆಲ್ಲ ಜೈನಧರ್ಮವನ್ನು ತಿಳಿಯಲು ಇದನ್ನೇ ಆಧಾರ ಮಾಡಿಕೊಂಡಿದ್ದು ಇದರ ಮಹತ್ವಕ್ಕೆ ಸಾಕ್ಷಿ ಆಗಿದೆ. ಜೈನಧರ್ಮದ ಪರಿಚಯ ಮಾಡಿಸಿಕೊಡುವ ಹಲವಾರು ಗ್ರಂಥಗಳು ಬಂದಿದ್ದರೂ, ಸರಳವಾಗಿ ಸಂಕ್ಷಿಪ್ತವಾಗಿ ನಿಖರವಾಗಿ ಜೈನಧರ್ಮವನ್ನು ಪರಿಚಯಿಸುವ ಎಲ್. ಗುಂಡಪ್ಪ ನವರ ಸಂಗ್ರಹ ಇಂದಿಗೂ ಮಾದರಿಯಾಗಿದೆ. ಈ ರೀತಿಯ ಪೀಠಿಕೆಯನ್ನು ಕನ್ನಡದ ಯಾವ ಕಾವ್ಯ ಸಂಗ್ರಹದಲ್ಲೂ ಕಾಣುವುದಿಲ್ಲ.

ಹೀಗೆ ಹತ್ತಾರು ವೈಶಿಷ್ಟ್ಯಗಳುಳ್ಳ ಕನ್ನಡ ಆದಿಪುರಾಣ ಸಂಗ್ರಹದ ಬಗ್ಗೆ ಗ್ರಂಥ ಗದ್ಯಪದ್ಯಗಳ ಹಿನ್ನೆಲೆಯಲ್ಲಿ ಮೊದಲಬಾರಿಗೆ ವಿಸ್ತೃತ ಅಧ್ಯಯನವನ್ನು ಈ ಸಂದರ್ಭದಲ್ಲಿ ಕೈಗೊಂಡು ಈ ಕೆಳಕಂಡ ಅಂಶಗಳನ್ನು ಹೊಸದಾಗಿ ಪ್ರತಿಪಾದಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಕನ್ನಡದಲ್ಲಿ ಹಸ್ತಪ್ರತಿ ಯುಗದಿಂದ ಕನ್ನಡ ಕಾವ್ಯ ಸಂಗ್ರಹ ಯುಗ ಬಂದು ಇತಿಹಾಸವನ್ನು ನಿರೂಪಿಸಲಾಗಿದೆ. ಮೈಸೂರು ವಿಶ್ವವಿದ್ಯಾಲಯದ ಕಾವ್ಯ ಸಂಗ್ರಹಗಳ ಕೊಡುಗೆಯನ್ನು ಚರ್ಚಿಸಲಾಗಿದೆ. ಕನ್ನಡ ಆದಿಪುರಾಣ ಸಂಗ್ರಹವನ್ನು ಅದ್ವಿತೀಯವಾಗಿ ಕನ್ನಡಕ್ಕೆ ಸಂಪಾದಿಸಿಕೊಟ್ಟ ಎಲ್.ಗುಂಡಪ್ಪನವರ ಜೀವನ ಮತ್ತು ಸಾಧನೆಗಳನ್ನು ಸಾಹಿತ್ಯ ಕೃತಿಗಳ ರಚನೆ ಮೂಲಕ ಕನ್ನಡಕ್ಕೆ ಅವರು ಸಲ್ಲಿಸುವ ಸೇವೆಯನ್ನು ಎರಡನೇ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಅದಿಪುರಾಣವಷ್ಟೇ ಅಲ್ಲದೆ ನಿಘಂಟಿನ ಕ್ಷೇತ್ರದಲ್ಲಿ ಅನುವಾದದ ಕ್ಷೇತ್ರದಲ್ಲಿ ಅವರು ಸಲ್ಲಿಸಿರುವ ಸೇವೆಯನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸಿದೆ.

ಅಧ್ಯಾಯ ೩ ರಲ್ಲಿ ಕನ್ನಡ ಗ್ರಂಥ ಸಂಪಾದನೆಯ ಸಂಕ್ಷಿಪ್ತ ಇತಿಹಾಸವನ್ನು ಎಲ್ಲ ಗುಂಡಪ್ಪನವರ ಕಾರ್ಯ ವಿಧಾನಕ್ಕೆ ಹಿನ್ನೆಲೆಯಾಗಿರುವುದರಿಂದ ವಿವರಿಸಲಾಗಿದೆ. ಕನ್ನಡ ಕಾವ್ಯ ಸಂಗ್ರಹಗಳ ಯುಗ ಬರುವವರೆಗೆ ಗ್ರಂಥ ಸಂಪಾದನೆ ಮಜಲುಗಳನ್ನು ಗುರುತಿಸಿದೆ. ಕಾವ್ಯ ಸಂಗ್ರಹಗಳಲ್ಲಿ ಗ್ರಂಥಸಂಗ್ರಹದ ಶಾಸ್ತ್ರದ ಬಳಕೆಯನ್ನು ವಿವರಿಸಿದೆ.

ಅಧ್ಯಾಯ ೪ ರಲ್ಲಿ ಎಲ್.ಗುಂಡಪ್ಪನವರ ಆದಿಪುರಾಣ ಕಾವ್ಯ ಸಂಗ್ರಹವು ಕನ್ನಡದ ಕಾವ್ಯ ಸಂಗ್ರಹಗಳ ಇತಿಹಾಸದಲ್ಲೇ ಹೇಗೆ ಅದ್ವಿತೀಯವಾಗಿದೆ ಎಂಬುದನ್ನು ಪ್ರತಿಪಾದಿಸಲಾಗಿದೆ. ಅವರ ಸಂಗ್ರಹ ವಿಧಾನ ಹೀಗಿದೆ.

೧. ಮೂಲ ಕಾವ್ಯ ಆಶ್ವಾಸಾನುಸಾರ ಇದ್ದರೆ ಗುಂಡಪ್ಪನವರ ಕಥಾಸ್ಮೃತಿ ಹಿನ್ನೆಲೆಯಲ್ಲಿ ಪ್ರಧಾನ ಶೀರ್ಷಿಕೆ, ಉಪ ಶೀರ್ಷಿಕೆಗಳನ್ನು ನೀಡಿ ಹೊಸ ವಿನ್ಯಾಸ ರೂಪಿಸಿದ್ದಾರೆ.

೨. ವಿಸ್ತಾರ ಗದ್ಯ ಭಾಗಗಳನ್ನು ಓಚಿತ್ಯ ಅರಿತು ಸಂಗ್ರಹಿಸಿದ್ದಾರೆ.

೩. ಪದ್ಯಗಳನ್ನು ಎಚ್ಚರಿಕೆಯಿಂದ ಆಯ್ಕೆ ಮಾಡಿದ್ದಾರೆ

೪. ಪದ್ಯದ ಭಾಗ, ಗದ್ಯದ ಭಾಗಗಳನ್ನು ಸೇರಿಸಿ ಹೊಸ ಗದ್ಯಭಾಗ ನಿರ್ಮಿಸಿದ್ದಾರೆ.

೫. ಪದ್ಯಗಳ ಅನುಕ್ರಮಣಿಕೆಯನ್ನು ಕೆಲವೆಡೆ ಮಾರ್ಪಡಿಸಿಕೊಂಡಿದ್ದಾರೆ.

೬. ಗದ್ಯಭಾಗ, ಪದ್ಯಭಾಗಗಳಲ್ಲಿ ಸಾಹಿತ್ಯ ಕಂಡು ಬರಲು ಕೊಂಡಿಪದ ಗಳನ್ನು ಬಳಸಿದ್ದಾರೆ.

೭. ಸಂಗ್ರಹ ಭಾಗದಲ್ಲಿ ಹೆಚ್ಚಾಗಿಲ್ಲದಿದ್ದರೂ ಪಾಠಾಂತರಗಳನ್ನು ಆಯ್ಕೆ ಮಾಡಿ ಕೊಂಡಿದ್ದಾರೆ. ಸಂಗ್ರಹ ಕಾವ್ಯಗಳಲ್ಲಿ ಪಾಠಾಂತರಗಳನ್ನು ಗುರುತಿಸುವ ವಿದ್ವಾಂಸರು ಕನ್ನಡದಲ್ಲಿ ಕೆಲವೇ ಮಂದಿ, ಡಿ.ಎಲ್.ನರಸಿಂಹಾಚಾರ್, ಎಂ.ವಿ.ಸೀತಾರಮಯ್ಯ, ಎಂ.ಆರ್.ಶ್ರೀಕಂಠಯ್ಯ. ಆ ಪೈಕಿ ಎಲ್. ಗುಂಡಪ್ಪನವರು ಒಬ್ಬರು.

೮. ಇಡೀ ಕಾವ್ಯ ಸಂಗ್ರಹಕ್ಕೆ ಪದ್ಯಗಳಿಗೆ ಕ್ರಮಸಂಖ್ಯೆ ನೀಡಿದ್ದಾರೆ. ೧ ರಿಂದ ೫೧೬ ಪದ್ಯಗಳವರೆಗೆ ಸಂಗ್ರಹ ಮಾಡಿದ್ದಾರೆ.

೯. ಮೇಲ್ಕಂಡ ವಿಧಾನಗಳು ಹೇಗೆ ಅಳವಡಿಸಿ ಆದಿಪುರಾಣ ಸಂಗ್ರಹದಲ್ಲಿ ಎಂಬುದನ್ನು ವಿಸ್ತಾರವಾಗಿ ಸೋದಾಹರಣವಾಗಿ ವಿಮರ್ಶೆ ಮಾಡಲಾಗಿದೆ.

ಕನ್ನಡ ಕಾವ್ಯ ಸಂಗ್ರಹವೊಂದರ ಸಮಗ್ರ ಅಧ್ಯಯನವನ್ನು ಈ ರೀತಿ ಕೈಗೊಂಡಿರುವುದು ಇದೇ ಮೊದಲು ಎನ್ನಬಹುದು.

ಹೀಗೆ ಕನ್ನಡ ಆದಿಪುರಾಣ ಸಂಗ್ರಹದಲ್ಲಿ ಕಂಡುಬರುವ ಸೂಚನಾಂಶಗಳನ್ನು ವೈಶಿಷ್ಟ್ಯಗಳನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸಿದೆ.

ಈ ಎಲ್ಲ ಅಂಶಗಳನ್ನು ಪರಿಸಮಾಪ್ತಿ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಿ ಎಲ್.ಗುಂಡಪ್ಪನವರು ಕನ್ನಡ ಕಾವ್ಯ ಸಂಗ್ರಹ ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ಗುರುತಿಸಲಾಗಿದೆ.

# ಅನುಬಂಧಗಳು

## ಅ. ಎಲ್. ಗುಂಡಪ್ಪನವರ ಸಮಗ್ರ ಕೃತಿಗಳ ಪಟ್ಟಿ

**ಪದ್ಯಗಳು – ಪ್ರಬಂಧಗಳು – ರೂಪಕ, ಭಾಷಣ ಇತ್ಯಾದಿ**

೧. ಚಟಾಕಿ ಮತ್ತು ಇತರ ಕವನಗಳು – ಸಣ್ಣ ಪುಸ್ತಕವಾಗಿ, ಅಲ್ಲದೆ ಕಿರಿಯರ ಕಾಣಿಕೆಯಲ್ಲಿ, ಅನೇಕ ಸಂಕಲನಗಳಲ್ಲಿ ಪ್ರಕಟಿತ.

ನವಚೇತನ, ದೂರು, ವಿಧವೆ, ದೋರಸಮುದ್ರ, ಮಲೆನಾಡ ಹುಡುಗಿ, ದೇವನ ಹರಿಕಾರರು, ಹೊನ್ನಹೂಗಳು, ಕಳೆದ ದಿನಗಳ ಬೆಳಕು, ಶ್ರೀರಂಗಪಟ್ಟಣ, ಗೆಳೆಯನೆ, ಬೆನಕನ ಪೂಜೆ, ಯಾವುದು ಹಿರಿಮೆ, ತಾಯಿ, ಚಟಾಕಿ, ಅಸಾಧ್ಯ ಎಂಬುದಿಲ್ಲ, ಮುಂದುಗಾಣಿಕೆ, ಅಕ್ಕ, ವಿಲಿಯಂ ಟೆಲ್.

೨. ಕನ್ನಡಿ ಸೇವೆ : ಭಾಷೆ, ಭಾಷಾಂತರ ಕಲೆ, ಜಾನಪದಗಳನ್ನು ಕುರಿತಾದ ಪ್ರಬಂಧಗಳು – ಕನ್ನಡ ತಮಿಳು, ಕನ್ನಡಕ್ಕೆ ತಮಿಳಿನಿಂದ ಎರವಲು ಮತ್ತು ಪ್ರಭಾವ, ಉಳಿಸಿಕೊಳ್ಳಬೇಕಾದ ಕೆಲವು ಮಾತುಗಳು – ಕೊ–ಕೋಡು, ನಾಡಬಯಲಿನಲ್ಲಿ ಗೌರೀಶಿಖರ, ಲಾವಣಿ ಅಥವ ವೀರಕಥೆ, ಮಲೆರಾಯ.

೩. ತಮಿಳು ಪುರಾತನರ ಕತೆಗಳು ಮತ್ತು ಹರಿಹರನ ರಗಳೆ – ತುಲನಾತ್ಮಕ ಲೇಖನ.

೪. ಸರ್ವಜ್ಞ ಮತ್ತು ತಿರುವಳ್ಳುವರ್ – ಲೇಖನ

೫. ಕನ್ನಡ ಸಾಹಿತ್ಯ ಚಿತ್ರಗಳು – ಮೊದಲನೆಯ ಸಾಲು : ವಿದ್ಯುಚ್ಚೋರ, ಭರತ ಬಾಹುಬಲಿ, ಕಣ್ಣಪ್ಪ, ಕಿನ್ನರ ಬೊಮ್ಮಯ್ಯ, ಉತ್ತರ ಕುಮಾರ, ನಿಶ್ಶಂಕೆಯ ಕತೆ (ಲಲಿತಾಂಗ, ವಿಶ್ವಾನುಲೋಮ), ತಾಂಡವಮುನಿ, ಕೋಳೂರು ಕೊಡಗೂಸು.

೬. ಕನ್ನಡ ಸಾಹಿತ್ಯ ಚಿತ್ರಗಳು – ಎರಡನೆಯ ಸಾಲು.

೭. ಕನ್ನಡ ಸಾಹಿತ್ಯ ಚಿತ್ರಗಳು – ಮೂರನೆಯ ಸಾಲು – ಭಾರತದ ನಾಯಕ ಮಣಿಗಳು, ಕರ್ಣ ರಸಾಯನ, ಸಾಹಸ ಭೀಮ, ಅಭಿಮಾನ ಧನ, ಪಾರ್ಥ ಪೌರುಷ, ಪ್ರತಿಜ್ಞಾ ಗಾಂಗೇಯ, ಧರ್ಮರಾಜ.

೮. ನಾಟ್ಯಗಾರ್ತಿಯರು – ಶಿಲಪ್ಪದಿಗಾರಂನಲ್ಲಿ ಮಾಧವಿ

೯. ಯುದ್ಧ ಸಿದ್ಧತೆ ಮತ್ತು ವ್ಯೂಹರಚನೆ – ಲೇಖನ

೧೦. ಕವಿ ವಾಣಿ – ಕವಿ ಮಹಿಮೆ – ೧೨ ಪ್ರಸಂಗಗಳು.

೧೧. ಮುಕುಂದ ಮಾಲಾ – ಗದ್ಯ ಪದ್ಯ ಭಾಷಾಂತರ

೧೨. ಅವ್ವೈಯಾರ್ ಇತ್ಯಾದಿ ಪ್ರಬಂಧಗಳು.

೧೩. ಭಾಸನ ಕರ್ಣ.

೧೪. ಅವ್ವೈಯಾರ್ ಕೃತಿಗಳು

೧೫. ಪಂಪ ಪರಿಚಯ

೧೬. ಪಂಪನ ಹಿತವಚನಗಳು.

೧೭. ಕಂಬರಾಮಾಯಣ – ಲೇಖನ.

೧೮. ಅರುಂಧತಿ – ಹಳೆಯ ಹಾಡು.

೧೯. ಬಾಹುಬಲಿ ಚರಿತ್ರಂ.

**ಇತರ ರಚನೆಗಳು.**

೧. ನಿಘಂಟು

ಇಂಗ್ಲೀಷ್ – ಕನ್ನಡ (ಮೈಸೂರು ವಿಶ್ವವಿದ್ಯಾನಿಲಯ)
ಕನ್ನಡ–ಕನ್ನಡ (ಸಾಹಿತ್ಯ ಪರಿಷತ್ತು)
ಶ್ರೀ ಚಾಮುಂಡಾ ನಿಘಂಟು
ಪತ್ರಿಕಾ ನಿಘಂಟು

೨. ರಾಷ್ಟ್ರೀಯ ಕವಿ ಸಮ್ಮೇಳನಕ್ಕಾಗಿ ಅನುವಾದಿಸಿದ ಕವನಗಳು – ಭಾರತದ ಭಾಷೆಯ ಕವಿಗಳಿಂದ.

೩. ಕನ್ನಡ ಭಾರತ ಕಥಾಮಂಜರಿ.

೪. ತೊರವೆ ರಾಮಾಯಣ.

೫. ಕನ್ನಡ ವ್ಯಾಕರಣ ಪಾಠಗಳು.

೬. ಪಂಚತಂತ್ರದ ಕತೆಗಳು – ಜಾಣಕತ್ತೆ. (ಪ್ರೊ. ರುದ್ರಪತಿಯವರೊಡನೆ ತಮಿಳಿನಲ್ಲಿ ಬರೆದದ್ದು)

**ತಮಿಳಿನಿಂದ ಭಾಷಾಂತರ ಕೃತಿಗಳು :**

೧. ಪೆರಿಯ ಪುರಾಣಂ.

೨. ಸುಬ್ರಹ್ಮಣ್ಯ ಭಾರತಿಯವರ ಪ್ರಬಂಧಗಳು.

೩. ರಾಷ್ಟ್ರಭಕ್ತ ಕವಿ ಭಾರತಿ.

೪. ಭಾರತಿಯವರ ಕವಿತೆಗಳು.

೫. ತಮಿಳು ಸಾಹಿತ್ಯ ಚರಿತ್ರೆ.

೬. ಅವ್ವೈಯಾರ್.

೭. ನನ್ನ ಚರಿತ್ರೆ.

೮. ತಿರುಕ್ಕುರಳ್.

೯. ನಾಲ್ಮಣಿ ಕಡುಕು.

೧೦. ವ್ಯಾಸರ ಔತಣ.

೧೧. ತಿರುವಾಚಕಂ.

೧೨. ಪಳ್ಳಿಕೊಂಡಪುರಂ.

೧೩. ಶಿಲಪ್ಪದಿಗಾರಂ.

೧೪. ಪೆರುಂಗತ್ತೈ – ಉದಯನನ ಚರಿತ್ರೆ.

೧೫. ರಾಜವೈದ್ಯ – ಸ್ವಾಮಿನಾಥ ಅಯ್ಯರ್ ಅವರ ಕತೆಯ ಅನುವಾದ.

೧೬. ದೇವಾನೆ – ರಾಜಾಜಿಯವರ ಕತೆ.

೧೭. ಕಾಗಕ್ಕ – ಕ.ನಾ. ಜಗನ್ನಾಥನ್ ಅವರ ಕತೆ.

೧೮. ತಮಿಳು ಭಾಷಾಬಾಂಧವ್ಯ.

೧೯. ಅತ್ತಿಶೂಡಿ.

೨೦. ಕೊನ್ರೈನೇಂದನ್.

೨೧. ಮದುರೈ – ಹಳೆಯ ಮಾತು.

೨೨. ನಲ್ವಳಿ.

೨೩. ತಿರುವಾರೂರ ಹಿರಿಮೆ.

೨೪. ಉದಯನ ಚರಿತ್ರೆ ಸಂಗ್ರಹ

**ಇಂಗ್ಲೀಷ್‌ನಿಂದ ಅನುವಾದಿತ**

**ಪ್ರಕಟಿತ**

೧. ಟಾಲ್‌ಸ್ಟಾಯ್ ರವರ ಕತೆಗಳು.

೨. ಸೊಹ್ರಾಬ್ ಮತ್ತು ರುಸ್ತುಂ (ನೀಳ್ಗವನ)

೩. ಥಾಮಸ್ ಅಲ್ವ ಎಡಿಸನ್.

೪. ಫ್ಲಾರೆನ್ಸ್ ನೈಟಿಂಗೇಲ್.

೫. ನರ-ರಾಕ್ಷಸ-ಡಾ. ಜೆಕಿಲ್ ಅಂಡ್ಮಿ. ಹೈಡ್ - ರಾಬರ್ಟ್ ಲೂಯಿ ಸ್ಟೀವನ್ಸನ್.

೬. ಫ್ಯಾಮಿಲಿ ಹಾಪಿನೆಸ್ - ಲಿಯೋ ಟಾಲ್‌ಸ್ಟಾಯ್.

೭. ನಗೆ ಹೊಗೆ - ಅಡ್ವೆಂಚರ್ ಇನ್ ಬುಖಾರ.

೮. ಕಳ್ಳುಮರಿ. ನಮಗೆಷ್ಟು ಭೂಮಿ ಬೇಕು. ಇಬ್ಬರು ಯಾತ್ರಿಕರು - ಬಿಡಿ ಕತೆಗಳಾಗಿ ಪ್ರಕತವಾಗಿವೆ.

**ಹಸ್ತಪ್ರತಿಗಳು :**

೧. ಬುಡ್ಡಿಯ ಭೂತ - ದಿ ಬಾಟಲ್ ಇಂಪ್.

೨. ಕ್ರೂಟ್ಸರ್ ಸೊನಾಟ - ಟಾಲ್‌ಸ್ಟಾಯ್ ಯವರ ಕತೆಯ ಭಾಷಾಂತರ.

೩. ನರಕದ ನಾಶ ಮತ್ತು ಪುನರುದ್ಧಾರ - ಟಾಲ್ ಸ್ಟಾಯ್ ರವರ ಕತೆಯ ಭಾಷಾಂತರ.

೪. ವಸಂತದ ಆದಿಕಾಲ ಎಂದು ಪ್ರಾರಂಭವಾಗುವ ಕಾದಂಬರಿ.

**ಸಂಪಾದಿತ ಗ್ರಂಥಗಳು**

೧. ಆದಿಪುರಾಣ ಸಂಗ್ರಹ.

೨. ನಾಡ ಪದಗಳು.

೩. ನಳ ಚರಿತ್ರೆ.

೪. ಶ್ರೀ ಭಗವಚ್ಚರಿತ್ರೆ.

೫. ಶ್ರೀ ಜ್ಯೋತಿರ್ಲಿಂಗ ಸ್ವಾಮಿಗಳ ಜೀವನ ಚರಿತ್ರೆ.

೬. ಶ್ರೀಮದಭಿನವ ವಿದ್ಯಾತೀರ್ಥ ವಿಜಯಂ.

**ಸಂಸ್ಕೃತದಿಂದ ಭಾಷಾಂತರಿಸಿದ ಕೃತಿಗಳು**

೧. ಭಾಸನ ಏಕಾಂತ ನಾಟಕಗಳು.

೨. ಚಾರುದತ್ತ.

೩. ಪ್ರತಿಜ್ಞಾ ಯೌಗಂಧರಾಯಣ.

೪. ಸ್ವಪ್ನವಾಸವದತ್ತ.

೫. ಪಂಚರಾತ್ರ.

**ಹಸ್ತಪ್ರತಿಗಳು**

೧. ಗೀತಗೋವಿಂದ.

೨. ಕಣ್ಣಗಿ – ರೂಪಕ.

೩. ಸೋಸಿ ಮಾತಾಡು.

೪. ಠಾಕೂರರ ಬಾಳಿನಲ್ಲಿ.

೫. ಶಿಲಪ್ಪದಿಗಾರಂ – ಒಂದು ಪರಿಚಯ.

೬. ಮುಕುಂದಮಾಲಾ. (ಗದ್ಯ ಪದ್ಯ ಭಾಷಾಂತರ)

೭. ಲೋಕನೀತಿ ಮತ್ತು ಇತರ ಕೆಲವು ನೀತಿ ಪದ್ಯಗಳು.

೮. ಚಿಂತನಗಳು – ಆಕಾಶ ವಾಣಿಯಲ್ಲಿ ಪ್ರಸಾರಿತ

# ಆ. ಆಕರ ಗ್ರಂಥ ಸೂಚಿ


೧) **ಹಸ್ತಪ್ರತಿ ಅಧ್ಯಯನ ಶಾಸ್ತ್ರ (೨೦೦೯)**
ನಾ. ಗೀತಾಚಾರ್ಯ, ಎಂ.ವಿ.ಸೀ. ಶತಮಾನೋತ್ಸವ ಗ್ರಂಥಮಾಲೆ, ನರಸಿಂಹ ಕಾಲೋನಿ, ಬೆಂಗಳೂರು

೨) **ಭಾರತೀಯ ಗ್ರಂಥ ಸಂಪಾದನಾ ಪರಿಚಯ (೧೯೩೮)**
ಅನುವಾದ : ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ
ಪ್ರ :

೩) **ಕನ್ನಡ ಗ್ರಂಥ ಸಂಪಾದನೆ (೨೦೦೫)**
ಲೇ : ಡಿ.ಎಲ್. ನರಸಿಂಹಾಚಾರ್
ಪ್ರ : ಡಿ.ವಿ.ಕೆ. ಮೂರ್ತಿ, ಮೈಸೂರು ೪

೪) **ಗ್ರಂಥ ಸಂಪಾದನೆ ಕೆಲವು ಅಧ್ಯಯನ (೧೯೯೭)**
ಲೇ : ವೈ.ಸಿ. ಭಾನುಮತಿ
ಪ್ರ : ಮೈಸೂರು

೫) **ಜೈನ ಪಾರಿಭಾಷಿಕ ಪದವಿವರ ಕೋಶ (೨೦೦೬)**
ಲೇ : ಸರಸ್ವತಿ ವಿಜಯಕುಮಾರ್ ಮತ್ತು ಬಾ.ವೇ. ಶ್ರೀಧರ
ಪ್ರ : ಮೈಸೂರು ವಿಶ್ವವಿದ್ಯಾಲಯ

೬) **ಪಂಪನ ಆದಿಪುರಾಣ ಕಥಾಮೃತ (೨೦೦೩)**
ಸಂ : ಎಲ್. ಬಸವರಾಜು (ಗದ್ಯಾನುವಾದ)
ಪ್ರ : ಮೈಸೂರು

೭) **ಕರ್ನಾಟಕ ಲೋಚನ (ರಜತ ಮಹೋತ್ಸವ ವಿಶೇಷಾಂಕ) (ಜೂನ್, ಡಿಸೆಂಬರ್ ೨೦೦೪)**
ಸಂಚಿಕೆ ೧, ೨ ಸಂಪುಟ – ೨೦
ಪ್ರ. : ಬಿ.ಎಂ.ಶ್ರೀ., ಪ್ರತಿಷ್ಠಾನ, ಬೆಂಗಳೂರು

೮) **ಆದಿಪುರಾಣಂ (ಮೂಲ ಗದ್ಯಾನುವಾದ)**
ಸಂ : ಕೆ.ಎಲ್.ಎನ್. ನರಸಿಂಹಶಾಸ್ತ್ರಿ (೨೦೦೪)
ಪ್ರ : ಕನ್ನಡ ಸಾಹಿತ್ಯ ಪರಿಷತ್ತು

೯) **ಪಂಪನ ಆದಿಪುರಾಣ ಮೂಲ ಮತ್ತು ಪಾಠಾಂತರಗಳು**
ಸಂ : ಎಲ್. ಬಸವರಾಜು
ಪ್ರ : ಗೀತಾ ಬುಕ್ ಹೌಸ್

೧೦) **ಪಂಪ ಸಂಪುಟ – ೧ (ಆದಿಪುರಾಣ – ಪಂಪಭಾರತ) (೨೦೦೯)**
ಸಂ. : ಟಿ.ವಿ. ವೆಂಕಟಾಚಲಶಾಸ್ತ್ರೀ
ಪ್ರ : ಪ್ರಸಾರಾಂಗ : ಹಂಪಿ ಕನ್ನಡ ವಿಶ್ವವಿದ್ಯಾಲಯ

೧೧) **ಆದಿತೀರ್ಥಂಕರರ ಚರಿತೆಗಳು (ಮಹಾಪ್ರಬಂಧ) ೧೯೯೪**
ಲೇ : ಸರಸ್ವತಿ ವಿಜಯಕುಮಾರ್
ಪ್ರ : ಮೈಸೂರು

೧೨) **ಕನ್ನಡ ಸಾಹಿತ್ಯ ಸಂಶೋಧನೆ : ಮಾರ್ಗ ಮತ್ತು ಇತಿಹಾಸ (೨೦೦೮)**
ಲೇ : ಸಂಗಮೇಶ ಸವದತ್ತಿಮಠ
ಪ್ರ : ಧಾರವಾಡ

## ಇ. ಆಕರ ಲೇಖನ ಸೂಚಿ

೧. **ಭಾಷಣ ಮಾಲಿಕೆ (ಅಪ್ರಕಟಿತ)**
ಲೇ : ಪ್ರೊ.ಜಿ. ಅಶ್ವತ್ಥನಾರಾಯಣ, ಬೆಂಗಳೂರು (೨೦೧೧)

೨. **ಆದಿಪುರಾಣ ಸಂಗ್ರಹವಿಧಾನ (ಅಪ್ರಕಟಿತಲೇಖನ)**
ಲೇ : ಡಿ. ಲಿಂಗಯ್ಯ, ಸಂಗ್ರಹಕಾರರು : ಎಲ್. ಜಿ. ಸುಮಿತ್ರ

೩. **ಎಲ್. ಗುಂಡಪ್ಪ – ಒಂದು ಸ್ಮರಣೆ**
ಲೇ : ಹಾ.ಮಾ. ನಾಯಕ (೧೯೮೬)
ಗ್ರಂಥ : ಸಂಪ್ರತಿ

೪. **ಪಂಡಿತ ಎಲ್. ಗುಂಡಪ್ಪ – ಒಂದು ಸ್ಮರಣೆ**
ಲೇ : ನಾರಾಯಣ ದತ್ತ, ಪ್ರಜಾವಾಣಿ ೪ ಜನವರಿ, ೨೦೦೪ (ದಿನಪತ್ರಿಕೆ)

೫. **ಶಬ್ಧಗಾರುಡಿಗ ಎಲ್. ಗುಂಡಪ್ಪ**
ಲೇ : ಆ.ರಾ. ಮಿತ್ರ, ವಿಜಯಕರ್ನಾಟಕ ೨೩ ಮಾರ್ಚ್, ೨೦೦೫ (ದಿನಪತ್ರಿಕೆ)

೬. **ಎಲ್. ಗುಂಡಪ್ಪನವರ ಸಮಗ್ರ ಕೃತಿಗಳ ಪಟ್ಟಿ**
ಸಂ: ಎಲ್. ಜಿ. ಸುಮಿತ್ರ

## ಈ. ಸಂದರ್ಶನಗಳ ವಿವರ

೧. **ಪ್ರೊ. ಜಿ. ಅಶ್ವತ್ಥನಾರಾಯಣ (೦೪/೦೪/೨೦೦೧)**
ಎಲ್. ಗುಂಡಪ್ಪನವರ, ವ್ಯಕ್ತಿತ್ವ, ಸಾಧನೆ ಬಗ್ಗೆ

೨. **ಎಲ್. ಜಿ. ಸುಮಿತ್ರಾ (ಎಲ್. ಗುಂಡಪ್ಪನವರ ಮಗಳು)**
ಅವರ ಸಂದರ್ಶನ – ಜೀವನ ವಿವರಗಳು ಮತ್ತು ಕೃತಿಗಳ ಮಾಹಿತಿ ಬಗ್ಗೆ.
(೦೫/೦೨/೨೦೦೧)